CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ನವೆಂಬರ್ ೩, ೨೦೦೫ (ಕಾರ್ತಿಕ ೧೨, ಶಕ ವರ್ಷ ೧೯೨೭) | ಸಂಚಿಕೆ ೪೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್. ರೋಡ್ರಿಂಗ್ಸ್, ಅಧೀನ ಕಾರ್ಯದರ್ಶಿ (ಕಾನೂನು ಕೋಶ), ಒಳಾಡಳಿತ ಮತ್ತು ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದಕ್ಕೆ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 97, ದಿನಾಂಕ: 15.6.2004.

2) ಶ್ರೀ ಹೆಚ್. ರೋಡ್ರಿಗ್ಸ್ ಅವರ ದಿನಾಂಕ: 4.8.2005ರ ಮನವಿ.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 99, ದಿನಾಂಕ: 14.3.2000.

**ಪ್ರಸ್ತಾವನೆ:**

ಶ್ರೀ ಪಿ.ಹೆಚ್. ಗಂಗಾಧರ ರಾವ್, ನಿವೃತ್ತ ಇಂಜಿನಿಯರ್ ಇನ್ ಚೀಫ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ: 15.6.2004ರ ಸರ್ಕಾರಿ ಆದೇಶದಲ್ಲಿ ಶ್ರೀ ಹೆಚ್.ರೋಡ್ರಿಗ್ಸ್, ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಕಾನೂನು ಕೋಶ), ಕರ್ನಾಟಕ ಸರ್ಕಾರದ ಸಚಿವಾಲಯರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಈ ಬಗ್ಗೆ ವಿಚಾರಣೆ ಮುಕ್ತಾಯಗೊಂಡಿರುತ್ತದೆ ಎಂದು ತಿಳಿಸಿ ಮೇಲೆ (2) ರಲ್ಲಿ ಓದಲಾದ ದಿನಾಂಕ: 4.8.2005ರ ಮನವಿ ಸಲ್ಲಿಸಿ ಸಂಭಾವನೆ ಮಂಜೂರು ಮಾಡಲು ಕೋರಿದ್ದಾರೆ. ದಿನಾಂಕ: 23.8.2004 ರಿಂದ 3.5.2005 ರವರೆಗಿನ ಅವಧಿಯಲ್ಲಿ ಒಟ್ಟು 7 ದಿನಗಳ ಕಾಲ ಮಂಡನಾಧಿಕಾರಿಯು ಕಾರ್ಯನಿರ್ವಹಿಸಿದ್ದು, ಈ ಸಂಬಂಧ ಮಂಡನಾಧಿಕಾರಿಗಳಿಗೆ ಅರ್ಹವಿರುವ ಸಂಭಾವನೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 97, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2005**

ಸರ್ಕಾರವು ಶ್ರೀ ಹೆಚ್. ರೋಡ್ರಿಗ್ಸ್, ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಕಾನೂನು ಕೋಶ), ಕರ್ನಾಟಕ ಸರ್ಕಾರದ ಸಚಿವಾಲಯರವರು ಪ್ರಸ್ತುತ ಪ್ರಕರಣದಲ್ಲಿ ದಿನಾಂಕ: 23.8.2004 ರಿಂದ 3.5.2005 ರವರೆಗಿನ ಅವಧಿಯಲ್ಲಿ ಒಟ್ಟು 7 ದಿನಗಳ ಕಾಲ ಮಂಡನಾಧಿಕಾರಿಯಾಗಿ ಕಾರ್ಯ ನಿರ್ವಹಿಸಿರುವುದಕ್ಕೆ ವಿಚಾರಣೆ ದಿನ ಒಂದಕ್ಕೆ ಅವರ ಮೂಲ ವೇತನದ ಶೇಕಡ 10 ರಂತೆ ಗರಿಷ್ಠ ರೂ.100.00 ರಂತೆ ಸಂಭಾವನೆಯನ್ನು ಮಂಜೂರು ಮಾಡಿದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052-ಸಚಿವಾಲಯ ಸಾಮಾನ್ಯ ಸೇವೆಗಳು-090 ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 1165

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ರಾಜಾಜಿನಗರ ಸಹಕಾರ ಸಂಘ ನಿಯಮಿತ, ಬೆಂಗಳೂರು ರವರ ಸಹಾಯಧನ ಮತ್ತು ಸಾಗಾಣಿಕೆ ವೆಚ್ಚದ ಬಿಲ್ಲುಗಳ ಪಾವತಿ ಮಾಡಲು ಕಾಲವಿಳಂಬ ವಿನಾಯಿತಿ ಮಂಜೂರಾತಿ ಮಾಡುವ ಕುರಿತು-ಅನುಮೋದನೆ.

**ಓದಲಾಗಿದೆ:** 1) ಆ.ನಾ.ಸ. ಆಯುಕ್ತರ ಪತ್ರ ಸಂಖ್ಯೆ: ಜನಿ:ಲೆಅ(ಉ).ಸಾ.ಸ.2000-01/86, ದಿನಾಂಕ: 04.07.2003.

2) ಅಪರ ನಿರ್ದೇಶಕರು, ಆ.ನಾ.ಸ. ಇಲಾಖೆ ರವರ ಪತ್ರ ಸಂಖ್ಯೆ: ಜನಿ:ಲೆಅ(ಉ)ಸ.ಸಾ.51/2004-05/134, ದಿನಾಂಕ: 07.01.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಪ್ರಸ್ತಾವನೆಯಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ರವರು ರಾಜಾಜಿನಗರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇವರು ಜೂನ್, 98 ಮತ್ತು ಜುಲೈ, 98ರ ಮಾಹೆಗಳಲ್ಲಿ ಸಹಾಯಧನ ಮತ್ತು ಸಾಗಾಣಿಕೆ ವೆಚ್ಚದ ಬಿಲ್ಲುಗಳನ್ನು ಪಾವತಿ ಮಾಡಲು ಸಂಬಂಧಿಸಿದ ಕಛೇರಿಗೆ ತಡವಾಗಿ ಸಲ್ಲಿಸಿದ್ದು, ಆ ಹಿನ್ನೆಲೆಯಲ್ಲಿ ಸದರಿಯವರಿಂದ ಕಾರಣ ಕೇಳಿದ್ದು, ತತ್ಸಂಬಂಧದಲ್ಲಿ ಕಛೇರಿಯ ಕಾರ್ಯನಿರ್ವಾಹಕ ಸಿಬ್ಬಂದಿಗಳಲ್ಲಿ 1998ನೇ ಡಿಸೆಂಬರ್ ತಿಂಗಳಿಂದ ಸೀಮೆಎಣ್ಣೆ ಕೂಪನ್ ವಿತರಣೆ ಕಾರ್ಯದಲ್ಲಿ ನಿಯೋಜಿಸಿದ್ದರಿಂದ ಮೇಲ್ಕಂಡ ಬಿಲ್ಲುಗಳನ್ನು ಪರಿಶೀಲಿಸಿ ಕಛೇರಿಗೆ ಸಲ್ಲಿಸಲು ವಿಳಂಬವಾಗಿರುವುದನ್ನು ಪರಿಗಣಿಸಿ ತತ್ಸಂಬಂಧ ದಾಸ್ತಾನಿನಲ್ಲಿ ಹೊಂದಾಣಿಕೆ ಮಾಡಿ ಸರಿಪಡಿಸಿ ಕಳುಹಿಸಲು ಸಂಘದವರೇ ಹೊಣೆಗಾರರಾಗಿರುವುದರಿಂದ, ಮೇಲ್ಕಂಡ ಮೊತ್ತವನ್ನು ಆರ್ಥಿಕ ವರ್ಷ 2003-04ನೇ ಸಾಲಿನಲ್ಲಿ ಪಾವತಿ ಮಾಡಲು ಹೊಂದಾಣಿಕೆ ಮಾಡಿಕೊಳ್ಳಲು ಸರ್ಕಾರದಿಂದ ಕಾಲವಿಳಂಬ ವಿನಾಯಿತಿ ಮಂಜೂರಾತಿಯನ್ನು ಕೋರಿ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ನಿಯಮಾನುಸಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 52 ಎಫ್‌ಸಿಎಸ್ 2003, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಜೂನ್, 98 ಮತ್ತು ಜುಲೈ, 98ರ ಮಾಹೆಗಳಲ್ಲಿ ಆಹಾರಧಾನ್ಯಗಳ ಸಹಾಯಧನ ರೂ.95,519.00 (ತೊಂಭತ್ತೈದು ಸಾವಿರದ ಐದುನೂರ ಹತ್ತೊಂಭತ್ತು ರೂಪಾಯಿಗಳು ಮಾತ್ರ) ಮತ್ತು ಸಾಗಾಣಿಕೆ ವೆಚ್ಚ ರೂ.4,633.00 (ನಾಲ್ಕು ಸಾವಿರದ ಆರುನೂರ ಮೂವತ್ಮೂರು ರೂಪಾಯಿಗಳು ಮಾತ್ರ) ವನ್ನು ರಾಜಾಜಿನಗರ ಸಹಕಾರ ಸಂಘ ನಿಗಮ ಬೆಂಗಳೂರು ರವರಿಗೆ ಪಾವತಿ ಮಾಡಲು ಆಡಳಿತಾತ್ಮಕ ನಿರ್ವಹಣೆ ಕಾರಣಗಳಿಂದ ಆದ ವಿಳಂಬವನ್ನು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಟಿ 96, ದಿನಾಂಕ: 10.07.1996ರ ಕಂಡಿಕೆ-21 ರಲ್ಲಿ ಪ್ರತ್ಯಾಯೋಜಿಸಿದ ನನ್ನ ಆರ್ಥಿಕ ಅಧಿಕಾರದಡಿ ಪ್ರದತ್ತವಾಗಿರುವಂತೆ ಈ ಪ್ರಕರಣದಲ್ಲಿ ಕಾಲ ವಿಳಂಬ ವಿನಾಯಿತಿ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎನ್. ಶಾಂತಕುಮಾರಿ**

ಪಿ.ಆರ್. 1267 ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## HEALTH & FAMILY WELFARE SECRETARIAT

**Subject:-** Formation of Quality Assurance Committee at the state and District level.

**Read :-** 1) Government of India letter No: F.N. 11017/03 to dated: 27-07-05

2) The Commissioner HFW Bangalore their note No:FWC/35 2005-06 dated: 3-08-2005.

**PREAMBLE**

In the letter dated: 27-07-2005 read at (1) above the Government of India has proposed to constitute a Quality Assurance Committee at the state level and the District level to ensure that the standards, for female and male sterilization as laid down by the Government of India are followed in respect of pre-operative measures (by way of pathological tests health of the patient etc)., and operational facilities (like sufficient number of necessary equipment and aseptic condition and post -operative follow-ups ) It is further proposed that, it is duty of the quality Assurance committee to collect and publish six monthly reports of the number of persons sterilized as well as the number of deaths or complications arising out of sterilization. The committee should meet at least once in six months. This proposal has been examined in detail and hence the following order.

**GOVERNMENT ORDER NO. HFW 125 FPR 2005, BANGALORE, DATED: 15th SEPTEMBER 2005**

After careful examination of the proposal, the Government of Karnataka is pleased to constitute state level quality assurance committee under the chairmanship of principal secretary / secretary and district level quality Assurance committee under the chairmanship of District Health Officer, Health and Family welfare Department with the following members.

**The state level Quality Assurance Committee**

| | | |
|---|---|---|
| 1 | Principal Secretary / Secretary,<br>Health and Family Welfare Department. | Chairman |
| 2 | Director Health and Family Welfare Services. | Member Secretary |
| 3 | Director Medical Education | Member |
| 4 | Project Director (R.C.H.) Health and Family Welfare Services | Member |
| 5 | One Gynealogist | Member |

| | | |
|---|---|---|
| 6 | One Anesthetist | Member |
| 7 | One Surgeon | Member |

**The District Level Qulity Assurance Committee.**

| | | |
|---|---|---|
| 1 | District Health Officer | Chairman |
| 2 | District Family welfare Officer | Member Secretary |
| 3 | One Gynealogist | Member |
| 4 | One Anesthetist | Member |
| 5 | One Surgeon | Member |

**Terms referance of the committee are.**

1) To review centers (public / private) providing family planning services in the state and district and ensure implementation of National standards.
2) To review and report deaths / complications due to sterilization in the state and district.
3) To review and report conception due to failure of sterilization in the state and district.
4) To review and report complication due to IUD/ Oral Pill.
5) Review quality assurance activities at state and district level.
6) To suggest measures to improve quality of family planning services.
7) The member mentioned in serial No. 3 to 7 and serial No. 2 to 6 in state and district level respectively will be nominated by Commissioner Health and Family Welfare Services.

By Order and in the Name of the Governor of Karnataka,

**R. LEELAVATHY**

Under Secretary to Government,

Health & Family Welfare Department

P.R. 1429

**SUB:** Insurance policy coverage to sterilization cases.

**READ:** 1) letter No. FNN.11017/7/2003, dated: 27.7.2005 from the Secretary Govt. of India, Ministry of Health & Family Welfare, Nirman Bhavan, New Delhi-110011.

2) letter No. FWO/6/2000-01, dated: 8.9.2005 from the commissioner, HFW Services, Bangalore.

**PREAMBLE:**

In the letter read at (1) above, the Government of India has suggested to introduce Insurance Scheme for cases undergoing sterilization operation. As per Order of Hon`ble Supreme Court dated: 1.3.2005 in writ petition 209/2003 which directed the State Governments to bring into effect an Insurance policy according to the format followed by the State of Tamilnadu until such time the Government of India prescribes a standard Insurance Policy. The State of Karnataka has agreed to bring in to effect an Insurance Policy according to the format followed by the state of Tamilnadu. The Commissioner, Health & Family Welfare Services, vide letter read at (2) above, has proposed that the Insurance premium of Rs.14.00 will be met out of the incentive money in the following manner.

(1) Rs.10-00 from surgeon`s charge out of Rs.20-00

(2) Rs.4-00 from Anesthetist`s charge out of Rs. 5-00

Further it has also been proposed that the deceased women would get Rs.2-00 lakhs payable by the Insurance company and Rs.1-00 Lakh payable as a Compensation amount under the Family Welfare Scheme and other conditions for payment of exgratia after the death of women due to sterilization remains the same.

Hence the following is the order.

**Government Order No: HFW 128 FPR 2005, Dated: 17th September 2005**

In the circumstances explained above, approval of Government is accorded for introduction of Insurance Scheme for mothers who undergo sterilization in the Government Hospital / local bodies/voluntary organizations and approved nursing homes.

The premium amount of Rs.14-00 per case, will be met out of the incentive money in the following manner.

(1) Rs.10-00 from surgeon’s charge out of Rs.20-00

(2) Rs. 4-00 from Anesthetist’s charge out of Rs.5-00

**The scope of cover of the policy is as under.**

| | | |
|---|---|---|
| a. | Death caused by accidental Injury during the period of stay in Hospital including such injury caused by "sterilization operation" and occurred within 30 days of such injury. | Amount assured Rs.2 Lakhs |
| b. | Insured person dies during stay in the hospital, solely and directly caused due to complication out of sterilization. | Amount assured Rs.2 Lakhs |
| c. | Dies within 30 days from the date of discharge after undergoing sterilisation operation and death caused directly solely due to complication. | Amount assured Rs.25,000/- |

The Insurance premium would be met out from RCH flexible Funds.

**The salient features of the above Insurance scheme are as follows:-**

1) Rs. 1-00 Lakh is sanctioned as compensation amount to every sterilisation death case. The Insurance Scheme is to provide additional compensation for the welfare of the children of the deceased family welfare acceptors.
2) The Insurance company would pay a compensation of Rs.2/- lakhs in addition to Rs.1-00 Lakh sanctioned compensation amount to the family of the deceased family welfare acceptors who die due to sterilization within the Government Hospital/voluntary Organization / local bodies/ Approved Nursing Homes from the date of admission to the date of discharge.
3) The amount of Rs.3-00 lakhs (Rupees 2 lakhs + Rs. 1 lakh) will be deposited in the Nationalised Bank in the name of the children of deceased mother equally.
4) If the mother has one child the amount will go to that child.
5) The spouse has no right to claim the amount.
6) If any litigation arises the compensation amount in excess shall be paid by the Government.
7) The Bank will pay annually 10% of the amount for a period of 10 years to the children of the deceased Family Welfare acceptors for meeting their expenditure for Survival / Education.
8) In case of minor the amount to be paid every year shall be given to the father / Guardian.
9) In case of any one of the child dies before attaining the age of 18, the balance amount will go to the other children. The matured amount shall be paid to the children equally.
10) The average age for women to undergo sterilization is 18 to 45 years.
11) The average period of stay in the Hospital after sterilization is 48 to 72 hours.
12) If the death occurs outside the Hospital, within 30 days after discharge, those mothers are eligible for Rs. 25,000/- subject to the condition that the death is due to medical reasons.

By Order and in the Name of the Governor of Karnataka,

**R. LEELAVATHY**

Under Secretary to Government,
Health & Family Welfare Department

P.R. 1430

**Subject:-** Reg- Compensation amount to sterilization death cases.

**Read:-** 1) Letter No:H-11017/7/2003 dated:27-07-05 from Sri. Prasanna Hota, Health and Family Welfare Secretary, Government of India, Ministry of Health and Family Welfare, New Delhi.

2) letter No:FWC/31/05-06 dated:22-08-2005 from the Commissioner HFW Bangalore, Karnataka.

**PREAMBLE:**

In the letter read at (1) above, the Government of India has proposed to increase compensation payable in the event of death of person due to sterilization. As per order of Honorable Supreme Court which directed that until the Government of India formulates norms for higher compensation, the State Government shall follow the practice of the state of Andhra Pradesh and shall pay Rs. 1 lakh in case of death of the patient sterilized, Rs. 30,000 in case of in-capacity and Rs. 20,000 in case of post operative complications limited to actual cost of the treatment.

The Commissioner Health and Family Welfare Department vide letter read at (2) above, proposed to enhance the compensation amount of Rs. 50,000 to Rs. 1,00,000 for every sterilization death cases in Karnataka, The Government of Karnataka has examined the proposal in detail as per order of Honorable Supreme Court In WP 209/2003 and hence the following orders.

**GOVERNMENT ORDER NO. HFW 129 FPR 2005 BANGALORE , DATED: 16th SEPTEMBER 2005**

In the Circumstances explained above, sanction is accorded for enhancement of Compensation amount from Rs. 50,000/- to Rs. 1,00,000/- for every sterilization death case.

The amount would be met out from State RCH fund till provision is made in the State budget.

The salient features of the above scheme are as follows:

1) The Government of Karnataka would pay a compensation of Rs. 1,00,000 (one Lakhs only) to the family of the deceased Family Welfare acceptor who dies due to sterilization within the Government Hospital / Voluntary Organisation / Local Bodies / Approved Nursing Homes from the date of admission to the date of discharge.
2) The amount of Rs. 1 Lakh will be deposited in the Nationalised Bank in the name of the children of the deceased mother equally. .
3) The spouse has no right to claim the amount.
4) If the death occurs outside the Hospital, within 30 days after discharge, the dependent children are eligible for Rs. 25,000 subject to the condition that the death is due to Medical reasons.

By Order and in the Name of the Governor of Karnataka,

**R. LEELAVATHY**

P.R. 1431

Under Secretary to Government,
Health & Family Welfare Department

**ENERGY SECRETARIAT**

**Subject:** Change of company's name from M/s Shri Mahadeo Soap Industries Pvt. Ltd. to M/s Rohit Surfactants Pvt. Ltd-Orders relating to:

**Read:** 1. Government order No: DE 183 NCE 2004, dated: 05.06.2004.
2. Letter No. KRED/08/SMSI/2005/1619 dated 02.09.2005 received from the MD, KREDL, Bangalore.

**PREAMBLE:**

In the Government Order dated 05.06.2004 read at (1) above, sanction has been accorded for transfer of 6 M.W. capacity Wind Power Project at Ittegehalli village, Chitradurga District to M/s Shri Mahadeo Soap Industries Pvt. Ltd.

Now, the Managing Director, Karnataka Renewable Energy Development Limited, Bangalore in his letter dated 02.09.2005 read at (2) above, has recommended to the Government for change of the company's name as M/s Rohit Surfactants Pvt. Ltd instead of M/s Shri Mahadeo Soap Industries Pvt. Ltd for the administrative reasons given by the developer.

The proposal has been examined and pass the following order:

**GOVERNMENT ORDER No. EN 250 NCE 2005, Bangalore, Dated: 3rd September 2005**

Government is pleased to accord sanction for the change of the company's name as M/s Rohit Surfactants Pvt. Ltd instead of M/s. Shri Mahadeo Soap Industries Pvt. Ltd with immediate effect.

By Order and in the Name of the Governor of Karnataka,

**SURESH B. KRISHNAPPANAVAR**

P.R. 1287

Under Secretary to Government, Energy Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಶ್ರೀ ಡಿ.ಬಿ. ಶ್ರೀಧರ್, ಉಗ್ರಾಣಪಾಲಕ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಚಿಕ್ಕಬಳ್ಳಾಪುರ ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೋಲಾರ ಇವರ ಪತ್ರ ಸಂಖ್ಯೆ: ಜಿಪಂಕೋ/ಮುಕಾನಿಅ/04-05, ದಿನಾಂಕ: 2.6.2004.
2) ಆದೇಶ ಸಂಖ್ಯೆ: ಗ್ರಾಅಪ 26 ಇಎನ್‌ಕ್ಯೂ 2004, ದಿನಾಂಕ: 4.6.2004.
3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ 26 ಇಎನ್‌ಕ್ಯೂ 2004, ದಿನಾಂಕ: 8.2.2005.
4) ಶ್ರೀ ಡಿ.ಬಿ. ಶ್ರೀಧರ್, ಉಗ್ರಾಣಪಾಲಕ, ಇವರ ಲಿಖಿತ ಉತ್ತರ ದಿನಾಂಕ: 17.3.2005.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೋಲಾರ ಇವರು ದಿನಾಂಕ: 1.6.2004 ರಂದು ಚಿಕ್ಕಬಳ್ಳಾಪುರ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಕಛೇರಿಗೆ ನೀಡಿ, ಸದರಿ ವಿಭಾಗದ ಅಧೀನದಲ್ಲಿ ಬರುವ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗದಲ್ಲಿನ ಆಹಾರಧಾನ್ಯಗಳು ಹಾಗೂ ದಾಸ್ತಾನು ಕೊರತೆ ಬಗ್ಗೆ ತನಿಖೆ ನಡೆಸಿ ಸಲ್ಲಿಸಿದ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 2.6.2004ರ ವರದಿಯನ್ನು ಸರ್ಕಾರವು ಪರಿಶೀಲಿಸಿ ಈ ಪ್ರಕರಣದಲ್ಲಿ ಅವ್ಯವಹಾರ ನಡೆದಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ

ಹಾಗೂ ಈ ಅವ್ಯವಹಾರಕ್ಕೆ ಸಂಬಂಧಪಟ್ಟ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಉಗ್ರಾಣಪಾಲಕ ಇವರುಗಳ ಮೇಲೆ ಶಿಸ್ತಿನ ನಡವಳಿಕೆಗಳನ್ನು ನಡೆಸಲು ನಿರ್ಧರಿಸಿ ಶ್ರೀ ನಾರಾಯಣರೆಡ್ಡಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಈ ಇಲಾಖೆಯ ವ್ಯಾಪ್ತಿಯಲ್ಲಿ ಈಗ ಕೆಲಸ ಮಾಡುತ್ತಿರಲಿಲ್ಲ ವಾದ್ದರಿಂದ, ಶ್ರೀ ಡಿ.ಬಿ. ಶ್ರೀಧರ್ ಉಗ್ರಾಣಪಾಲಕ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಚಿಕ್ಕಬಳ್ಳಾಪುರ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 4.6.2004ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಅವರು ನಡೆಸಿದ್ದರೆನ್ನಲಾದ ಅಕ್ರಮಗಳಿಗೆ ಸಂಬಂಧಿಸಿದಂತೆ ಕ.ಸ.ಸೇ (ವ.ನಿ.ಅ.) ನಿಯಮ 1957ರ ನಿಯಮ 11 ರನ್ವಯ ಇವರುಗಳಿಗೆ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 8.2.2005 ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸಿಗೆ ಶ್ರೀ ಡಿ.ಬಿ. ಶ್ರೀಧರ್ ಉಗ್ರಾಣಪಾಲಕ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 17.3.2005 ರಂದು ಲಿಖಿತ ಉತ್ತರವನ್ನು ಸಲ್ಲಿಸಿ, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದಾರೆ ಹಾಗೂ ಅಮಾನತ್ತನ್ನು ತೆರವುಗೊಳಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸುವಂತೆ ಕೋರಿದ್ದಾರೆ.

ಸದರಿ ನೌಕರರನ್ನು ಸೇವೆಯಿಂದ ಅಮಾನತ್ತುಗೊಳಿಸಿ, ಈಗಾಗಲೇ ಆರು ತಿಂಗಳಿಗಿಂತ ಹೆಚ್ಚಿನ ಅವಧಿ ಸಂದಿರುವುದರಿಂದ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) 1957ರ ನಿಯಮ-10ನೇ ನಿಯಮದ (5)ನೇ ಉಪ ನಿಯಮ (ಸಿ) ಪ್ರಕಾರ ಇವರ ಅಮಾನತ್ತನ್ನು ತೆರವುಗೊಳಿಸಿ ಇವರನ್ನು ಸೇವೆಗೆ ಪುನರ್ ಸ್ಥಾಪಿಸಲು ಸರ್ಕಾರವು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 26 ಇಎನ್‌ಕ್ಯೂ 2004, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) 1957ರ ನಿಯಮ-10ನೇ ನಿಯಮದ (5)ನೇ ಉಪ ನಿಯಮ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಡಿ.ಬಿ. ಶ್ರೀಧರ್, ಉಗ್ರಾಣಪಾಲಕ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿದೆ.

ಅಮಾನತ್ತು ತೆರವಿನ ನಂತರ ಶ್ರೀ ಡಿ.ಬಿ. ಶ್ರೀಧರ್, ಉಗ್ರಾಣಪಾಲಕ, (ದ್ವಿ.ದ.ಸ.) ಇವರನ್ನು ಖಾಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನೇಮಿಸಲು ಕೋಲಾರ ಜಿಲ್ಲೆ ಬಿಟ್ಟು ಬೇರೆಡೆಗೆ ನೇಮಿಸಲು ಇವರ ಸೇವೆಯನ್ನು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1298

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ಕೈಗಾರಿಕಾ ಉತ್ತೇಜನಾಧಿಕಾರಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ನೇಮಿಸುವುದರ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಐ 169 ಐಸಿಎಸ್ 2003, ದಿನಾಂಕ: 27.10.2003.
2) ಸರ್ಕಾರಿ ಆದೇಶ ಸಂಖ್ಯೆ: ವಾಕೈ 75 ಕೈಸೇವಿ 1999, ದಿನಾಂಕ: 29.07.2000.
3) ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಲೆಕ್ಕಪತ್ರ/ಎ1/64/2004-05, ದಿನಾಂಕ: 03.01.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯನ್ನು ಪುನರ್‌ರಚಿಸಲಾಗಿದ್ದು, ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಒಟ್ಟು 27 ಕುಶಲಕರ್ಮಿ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಲಾಗಿರುತ್ತದೆ. ಈ ಪೈಕಿ 19 ಜಿಲ್ಲೆಗಳಲ್ಲಿ ಕುಶಲ ಕರ್ಮಿ ತರಬೇತಿ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದು, ಸದರಿ ಸಂಸ್ಥೆಗಳ ಕಾರ್ಯನಿರ್ವಹಣೆಯನ್ನು ಪರಿಗಣಿಸಿ ಉಳಿದ 8 ಜಿಲ್ಲೆಗಳ ಕುಶಲ ಕರ್ಮಿ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಕೈಗಾರಿಕಾಭಿವೃದ್ಧಿ ಆಯುಕ್ತರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಇಲಾಖೆಯ ಪುನರ್‌ರಚನೆಯ ಪೂರ್ವದಲ್ಲಿ ಕುಶಲಕರ್ಮಿ ತರಬೇತಿ ಸಂಸ್ಥೆಗಳಲ್ಲಿ ಹಿರಿಯ ಬೋಧಕರನ್ನು ಸಂಸ್ಥೆಯ ಮುಖ್ಯಸ್ಥರನ್ನಾಗಿ ಹಾಗೂ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು. ಆದರೆ ಕೈಗಾರಿಕಾ ಉತ್ತೇಜನಾಧಿಕಾರಿಗಳು ಹಿರಿಯ ಬೋಧಕರಿಗಿಂತ ಹೆಚ್ಚಿನ ದರ್ಜೆಯ ವೃಂದಕ್ಕೆ ಸೇರಿದವರಾಗಿರುವುದರಿಂದ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ 19 ಜಿಲ್ಲೆಗಳಲ್ಲಿನ ಕುಶಲಕರ್ಮಿ ತರಬೇತಿ ಸಂಸ್ಥೆಗಳಿಗೆ ಕೈಗಾರಿಕಾ ಉತ್ತೇಜನಾಧಿಕಾರಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯನ್ನಾಗಿ ನೇಮಿಸುವಂತೆ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 08 ಕೈಸೇವಿ 2005, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ 19 ಜಿಲ್ಲೆಗಳಲ್ಲಿನ (ಹತ್ತೊಂಬತ್ತು) ಕುಶಲ ಕರ್ಮಿ ತರಬೇತಿ ಸಂಸ್ಥೆಗಳಿಗೆ ಕೈಗಾರಿಕಾ ಉತ್ತೇಜನಾಧಿಕಾರಿಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳನ್ನಾಗಿ ಘೋಷಿಸುವ ಬಗ್ಗೆ ಮಹಾಲೇಖಪಾಲರಿಂದ ಅಧಿಕಾರ ಪತ್ರ (Authorisation) ಪಡೆಯುವ ಷರತ್ತಿಗೊಳಪಟ್ಟು ನೇಮಿಸಿದೆ.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 184 ವೆಚ್ಚ-1 2005, ದಿನಾಂಕ: 12.08.2005 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು).

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 08 ಕೈಸೇವಿ 2005, ಬೆಂಗಳೂರು, ದಿನಾಂಕ: 01.09.2005**

**ಹಾಲಿ ಕಾರ್ಯನಿರ್ವಹಿಸುತ್ತಿರುವ ಕುಶಲಕರ್ಮಿ ತರಬೇತಿ ಸಂಸ್ಥೆಗಳು**

| ಕ್ರ.ಸಂ. | ಕುಶಲಕರ್ಮಿ ತರಬೇತಿ ಸಂಸ್ಥೆ | ಅಧಿಕಾರಿಯ ಪದನಾಮ |
|---|---|---|
| 1 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಚನ್ನಪಟ್ಟಣ, ಬೆಂಗಳೂರು (ಗ್ರಾಮಾಂತರ) | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಚನ್ನಪಟ್ಟಣ, ಬೆಂಗಳೂರು (ಗ್ರಾಮಾಂತರ). |
| 2 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಬೆಳಗಾಂ. | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಬೆಳಗಾಂ. |
| 3 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಬಳ್ಳಾರಿ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಬಳ್ಳಾರಿ |
| 4 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಬೀದರ್ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಬೀದರ್ |
| 5 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಬಿಜಾಪುರ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಬಿಜಾಪುರ |
| 6 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಚಿಕ್ಕಮಗಳೂರು | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಚಿಕ್ಕಮಗಳೂರು. |
| 7 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಚಿತ್ರದುರ್ಗ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಚಿತ್ರದುರ್ಗ |
| 8 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಹುಬ್ಬಳ್ಳಿ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಹುಬ್ಬಳ್ಳಿ |
| 9 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಗುಲ್ಬರ್ಗ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಗುಲ್ಬರ್ಗ |
| 10 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಹಾಸನ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಹಾಸನ |
| 11 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಕುಮಟಾ, ಕಾರವಾರ ಜಿಲ್ಲೆ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಕುಮಟಾ, ಕಾರವಾರ ಜಿಲ್ಲೆ |
| 12 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ |
| 13 | ಕುಶಲ ಕರ್ಮಿ ತರಬೇತಿ ಸಂಸ್ಥೆ, ನಾಗಮಂಗಲ, ಮಂಡ್ಯ ಜಿಲ್ಲೆ. | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ನಾಗಮಂಗಲ, ಮಂಡ್ಯ ಜಿಲ್ಲೆ. |
| 14 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಬನ್ನಡ್ಕ, ಮಂಗಳೂರು ಜಿಲ್ಲೆ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಬನ್ನಡ್ಕ, ಮಂಗಳೂರು ಜಿಲ್ಲೆ |
| 15 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಹುಣಸೂರು, ಮೈಸೂರು ಜಿಲ್ಲೆ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಹುಣಸೂರು, ಮೈಸೂರು ಜಿಲ್ಲೆ |
| 16 | ಕುಶಲ ಕರ್ಮಿ ತರಬೇತಿ ಸಂಸ್ಥೆ, ರಾಯಚೂರು | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ರಾಯಚೂರು |
| 17 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಸಾಗರ, ಶಿವಮೊಗ್ಗ ಜಿಲ್ಲೆ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಸಾಗರ, ಶಿವಮೊಗ್ಗ ಜಿಲ್ಲೆ |
| 18 | ಕುಶಲ ಕರ್ಮಿ ತರಬೇತಿ ಸಂಸ್ಥೆ, ತುಮಕೂರು ಜಿಲ್ಲೆ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ತುಮಕೂರು ಜಿಲ್ಲೆ |
| 19 | ಕುಶಲ ಕರ್ಮಿ ತರಬೇತಿ ಸಂಸ್ಥೆ, ಕೊಪ್ಪಳ | ಕೈಗಾರಿಕಾ ಉತ್ತೇಜನಾಧಿಕಾರಿ ಕುಶಲ ಕರ್ಮಿ ತರಬೇತಿ ಸಂಸ್ಥೆ, ಕೊಪ್ಪಳ |

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1299 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಶಾಂದಾರ್ ಸಲಾಮೆ, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಹೆಡತಲೆ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ ಮೈವಿ:32:2004-05 ದಿನಾಂಕ: 11.03.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಡಾ: ಶಾಂದಾರ್ ಸಲಾಮೆ, ಇವರು ಪ್ರಾಥಮಿಕ ಆರೋಗ್ಯ ಕೇಂದ್ರ, ಹೆಡತಲೆ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ ಇಲ್ಲಿ ದಿನಾಂಕ: 08.10.2002 ರಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು ತದನಂತರ ದಿನಾಂಕ: 10.6.2004 ರಿಂದ 08.08.2004ರ ವರೆಗೆ ಅನಾರೋಗ್ಯದ ನಿಮಿತ್ತ

ಸಂಯುಕ್ತ ರಜೆಗೆ ಅನುಮತಿ ಪಡೆದುಕೊಂಡು ರಜೆ ಮುಗಿದ ಮರುದಿನ ದಿನಾಂಕ: 9.8.2004 ರಂದು ಕರ್ತವ್ಯಕ್ಕೆ ಹಾಜರಾಗದೇ ನಂತರ ಅನಧಿಕೃತ ಗೈರುಹಾಜರಾಗಿ, ಕರೆ ನೋಟೀಸ್ ನೀಡಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಈ ರೀತಿ ಸದರಿ ವೈದ್ಯರು ಅನಧಿಕೃತ ಗೈರುಹಾಜರಿಯಾಗಿ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯ ಲೋಪ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 293 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಶಾಂದಾರ್ ಸಲಾಮೆ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಹೆಡತಲೆ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ ಇವರು ದಿನಾಂಕ: 9.8.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 9.8.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(1)(2)ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ತಗ್ಗಿನಮನಿ**

ಪಿ.ಆರ್. 1300 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 112 ಸಿಎಲ್‌ಎಂ 2005, ದಿನಾಂಕ: 27.05.2005.
2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಎಸ್‌ಆರ್:72:ಎಕ್ಸ್‌ಎಂಎ:2005-06, ದಿನಾಂಕ: 24.06.2005.
3) ಶ್ರೀ ಬಿ.ಎಸ್. ವಿಶ್ವನಾಥನ್ ರವರ ದಿನಾಂಕ: 08.07.2005ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ (1) ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಅನ್ನು ಮತ್ತಷ್ಟು ತಿದ್ದುಪಡಿ ಮಾಡುವ ಸಲುವಾಗಿ ಕೆಳಕಂಡ ವ್ಯಕ್ತಿಗಳನ್ನೊಳಗೊಂಡ ಸಮಿತಿಯನ್ನು ರಚಿಸಿ ಸಹಕಾರ ಸಂಘಗಳ ನಿಬಂಧಕರನ್ನು ಸದರಿ ಸಮಿತಿಯು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಿದೆ.

1. ಶ್ರೀ ಬಿ.ಎಸ್. ವಿಶ್ವನಾಥನ್, ಮಾಜಿ ಅಧ್ಯಕ್ಷರು ಮತ್ತು ಹಾಲಿ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು.
2. ಶ್ರೀ ಎಂ.ಸಿ. ನಾಣಯ್ಯ, ಮಾಜಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು, ಮಡಿಕೇರಿ.
3. ಶ್ರೀ ಶಿವನಾಂದ ಪಾಟೀಲ್, ಶಾಸಕರು ಮತ್ತು ಅಧ್ಯಕ್ಷರು, ಡಿ.ಸಿ.ಸಿ. ಬ್ಯಾಂಕ್ ನಿ., ಬಿಜಾಪುರ.

ಮೇಲೆ ಉಲ್ಲೇಖ (2) ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸಮಿತಿಯ ಮೂವರು ಸದಸ್ಯರಲ್ಲಿ ಒಬ್ಬರನ್ನು ಅಧ್ಯಕ್ಷರನ್ನಾಗಿ ನೇಮಿಸಬೇಕೆಂದು ಕೋರಿದ್ದಾರೆ. ಉಲ್ಲೇಖ (3)ರ ಪತ್ರದಲ್ಲಿ ಶ್ರೀ ಬಿ.ಎಸ್. ವಿಶ್ವನಾಥನ್ ಅವರು ಸದರಿ ಸಮಿತಿಯು ಪರಿಶೀಲಿಸಬೇಕಾದ ಅಂಶಗಳು ವಿಸ್ತೃತವಾಗಿದ್ದು, ಅಗತ್ಯವಾದರೆ ಹೊರ ರಾಜ್ಯಗಳಿಗೆ ಮತ್ತು ನವದೆಹಲಿಗೆ ಭೇಟಿ ನೀಡಬೇಕಾಗುತ್ತದೆಂದೂ ಸಮಿತಿಗೆ ನಿಗದಿಪಡಿಸಿರುವ ಅವಧಿಯು ಸಾಕಾಗದಿರುವುದರಿಂದ ಹೆಚ್ಚಿನ ಕಾಲಾವಕಾಶ ಅಗತ್ಯವಿರುತ್ತದೆಂದು ತಿಳಿಸಿ ದಿನಾಂಕ: 31.12.2005 ರವರೆಗೆ ಕಾಲಾವಕಾಶ ವಿಸ್ತರಿಸಬೇಕೆಂದೂ ಸದರಿ ಸಮಿತಿಗೆ ನಿವೃತ್ತ ಸಹಕಾರ ಸಂಘಗಳ ಅಪರ ನಿಬಂಧಕರಾದ ಶ್ರೀ ಎಂ.ಎನ್. ಅಶ್ವತ್ಥನಾರಾಯಣ ಅವರನ್ನು ಸಹಕಾರ್ಯದರ್ಶಿಯನ್ನಾಗಿ ನೇಮಿಸಬೇಕೆಂದೂ ಹಾಗೂ ಸಮಿತಿಯ ಕಾರ್ಯ ಕಲಾಪಗಳಿಗೆ ತಗಲಬಹುದಾದ ಎಲ್ಲಾ ಆಡಳಿತಾತ್ಮಕ ವೆಚ್ಚಗಳನ್ನು ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಳವು ಭರಿಸಲು ಸೂಚಿಸಬೇಕೆಂದೂ ಕೋರಿದ್ದಾರೆ. ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 112 ಸಿಎಲ್‌ಎಂ 2005, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ಕ್ಕೆ ಮತ್ತಷ್ಟು ತಿದ್ದುಪಡಿ ಸಲಹೆ ಮಾಡಲು ರಚಿಸಿರುವ ತ್ರಿಸದಸ್ಯ ಸಮಿತಿಗೆ ಶ್ರೀ ಬಿ.ಎಸ್. ವಿಶ್ವನಾಥನ್, ಮಾಜಿ ಅಧ್ಯಕ್ಷರು ಮತ್ತು ಹಾಲಿ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು ಇವರನ್ನು ಅಧ್ಯಕ್ಷರನ್ನಾಗಿ ಮತ್ತು ನಿವೃತ್ತ ಸಹಕಾರ ಸಂಘಗಳ ಅಪರ ನಿಬಂಧಕರಾದ ಶ್ರೀ ಎಂ.ಎನ್. ಅಶ್ವತ್ಥನಾರಾಯಣ ಅವರನ್ನು ಸಹಕಾರ್ಯದರ್ಶಿಯನ್ನಾಗಿ ನೇಮಕ ಮಾಡುತ್ತದೆ. ಮುಂದುವರೆದು ಸದರಿ ಸಮಿತಿಯು ಅಗತ್ಯಬಿದ್ದರೆ ಹೊರ ರಾಜ್ಯಗಳಲ್ಲಿ ಪ್ರವಾಸ ಕೈಗೊಳ್ಳಬಹುದು ಮತ್ತು ಸಮಿತಿಯ ಕಾರ್ಯಕಲಾಪಗಳಿಗೆ ತಗಲುವ ಎಲ್ಲಾ ಆಡಳಿತಾತ್ಮಕ ವೆಚ್ಚಗಳನ್ನು ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಲವು ಭರಿಸತಕ್ಕದ್ದು ಎಂದು ಆದೇಶಿಸುತ್ತದೆ.

ಈ ಸಮಿತಿಯು ದಿನಾಂಕ: 31.12.2005 ರೊಳಗೆ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಬ್ಬಾಚಾರಿ**

ಪಿ.ಆರ್. 1305 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಆರ್ಥಿಕ ಇಲಾಖೆಯಲ್ಲಿ MidTerm Appraisal Report ಅನ್ನು ಜಾರಿಗೆ ತರುವ ಸಲುವಾಗಿ ಒಂದು ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಮಾನ್ಯ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ 2233/2005, ದಿನಾಂಕ: 9.9.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯಲ್ಲಿ ಸುಧಾರಣೆಗಳನ್ನು ಮುಂದುವರಿಸುವ ಅಗತ್ಯವಿದ್ದು ಹಾಗೂ Mid Term Appraisal Report ಅನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವ ಸಲುವಾಗಿ ಒಂದು ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಿ ಸದರಿ ಹುದ್ದೆಗೆ ಶ್ರೀ ಡಿ.ಎನ್. ನರಸಿಂಹರಾಜು, ಐ.ಎ.ಎಸ್, ರವರನ್ನು ನಿಯುಕ್ತಿಗೊಳಿಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಆರ್ಥಿಕ ಇಲಾಖೆಯಲ್ಲಿ ಸುಧಾರಣೆಗಳನ್ನು ಮುಂದುವರಿಸುವ ಸಲುವಾಗಿ ಹಾಗೂ Mid Term Appraisal Report ಅನ್ನು ಕಟ್ಟು ನಿಟ್ಟಾಗಿ ಜಾರಿಗೆ ತರಲು ಕಾರ್ಯದರ್ಶಿ ಹುದ್ದೆಯ ಸೃಜನೆಯ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 55 ಸಸಿವಿ 2005, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣದಿಂದಾಗಿ ಒಂದು ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಡಿ.ಎನ್. ನರಸಿಂಹರಾಜು, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 5934 ಪ್ರ.ಕಾ/2005, ದಿನಾಂಕ: 12.9.2005 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್. 1311 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಡಿ.ಬಿ. ನಾಯಕ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 53 ಎಸ್‌ಇಎನ್ 97, ದಿನಾಂಕ: 01.01.2001.

2) ಪತ್ರದ ಕ್ರಮಾಂಕ: ಲೋಕ್/ಎಆರ್‌ಇ-1/ಇಎನ್‌ಕ್ಯೂ-85/2002-03, ದಿನಾಂಕ: 13.01.2005 ಸನ್ಮಾನ್ಯ ಲೋಕಾಯುಕ್ತರವರಿಂದ.

**ಪ್ರಸ್ತಾವನೆ:**

ಶ್ರೀ ಡಿ.ಬಿ. ನಾಯಕ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಬೆಳಗಾವಿ ಮಹಾನಗರ ಪಾಲಿಕೆಯ ಆಯುಕ್ತರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ನಿಯಮಗಳನ್ನು ಉಲ್ಲಂಘಿಸಿ ಅನೇಕ ಕಟ್ಟಡಗಳ ನಕ್ಷೆ ಮಂಜೂರು ಮಾಡಿರುವುದಾಗಿಯೂ ಹಾಗೂ ಅಧಿಕಾರಿಯು ಭ್ರಷ್ಟಾಚಾರದಲ್ಲಿ ತೊಡಗಿರುವುದಾಗಿಯೂ ಆರೋಪಿಸಿ ಶ್ರೀ ವಿ.ಎಂ. ತೋಡಕರ್ ಎಂಬ ಒಂದನೇ ದರ್ಜೆ ಗುತ್ತಿಗೆದಾರರು ಸಲ್ಲಿಸಿದ ದೂರಿನಲ್ಲಿನ ಆರೋಪದ ಮೇಲೆ ಇವರ ವಿರುದ್ಧ ಕರ್ನಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಇಲಾಖಾ ವಿಚಾರಣೆಯನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 01.01.2001ರ ಸರ್ಕಾರಿ ಆದೇಶದಲ್ಲಿ ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲಾಯಿತು. ಸನ್ಮಾನ್ಯ ಲೋಕಾಯುಕ್ತರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಡಿಷನಲ್ ರಿಜಿಸ್ಟ್ರಾರ್ ವಿಚಾರಣೆಗಳು-1 ರವರು ವಿಚಾರಣೆ ಕೈಗೊಂಡು ದಿನಾಂಕ: 31.07.2004 ರಂದು ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಆರೋಪ ಸಾಬೀತಾಗಿರುವುದಿಲ್ಲವೆಂಬ ವರದಿಯನ್ನು ನೀಡಿದ್ದಾರೆ. ಈ ವರದಿಯನ್ನು ಪರಾಮರ್ಶಿಸಿದ ಲೋಕಾಯುಕ್ತರು ಮೇಲೆ (2) ರಲ್ಲಿ ಓದಲಾದ ದಿನಾಂಕ: 13.01.2005ರ ಪತ್ರದಲ್ಲಿ ಶ್ರೀ ಡಿ.ಬಿ. ನಾಯಕ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ಆರೋಪಮುಕ್ತರನ್ನಾಗಿಸಲು ಶಿಫಾರಸ್ಸು ಮಾಡಿದ್ದಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 53 ಎಸ್‌ಇಎನ್ 97, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು, ಶ್ರೀ ಡಿ.ಬಿ. ನಾಯಕ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿನಾಂಕ: 01.01.2001ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪದಿಂದ ಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಪಿ.ಆರ್. 1312 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಮಹಮ್ಮದ್‌ಗೌಸ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿಯನ್ನು ನೇಮಿಸುವ ಬಗ್ಗೆ ಪರಿಷ್ಕೃತ ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 107 ಎಸ್‌ಇಎನ್ 94, ದಿನಾಂಕ: 19.4.2005.

2) ಶ್ರೀ ದೇಸೀಗೌಡ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರ ಪತ್ರ ದಿನಾಂಕ: 31.5.2005.

**ಪ್ರಸ್ತಾವನೆ:**

ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಇವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 19.4.2005ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ದೇಸೀಗೌಡ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಶ್ರೀ ದೇಸೀಗೌಡ, ನಿವೃತ್ತ

ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಮೇಲೆ (2) ರಲ್ಲಿ ಓದಲಾದ ದಿನಾಂಕ: 31.5.2005ರ ಪತ್ರದಲ್ಲಿನ ಕೋರಿಕೆಯನ್ವಯ ಅವರ ಬದಲಿಗೆ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 107 ಎಸ್‌ಇಎನ್ 94, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯನ್ನು ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಸಮಸಂಖ್ಯೆಯ ದಿನಾಂಕ: 19.4.2005ರ ಸರ್ಕಾರದ ಆದೇಶದಲ್ಲಿ ಶ್ರೀ ದೇಸೀಗೌಡ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದ್ದ ಆದೇಶವನ್ನು ರದ್ದುಗೊಳಿಸಿ ಅವರ ಬದಲಿಗೆ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 3 ಸೇಇವಿ 96 ದಿನಾಂಕ: 24.4.98 ಹಾಗೂ ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರಲ್ಲಿ ನಿಗದಿ ಪಡಿಸಿರುವಂತೆ ಗೌರವ ಧನ ಹಾಗೂ ಪ್ರಯಾಣ ಭತ್ಯೆ ಪಡೆಯುತ್ತಾರೆ. ವಿಚಾರಣೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು 3 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದು ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈಗಾಗಲೇ ನೇಮಿಸಿರುವುದನ್ನು ಮುಂದುವರೆಸುತ್ತದೆ.

ವಿಚಾರಣೆಯನ್ನು ಬೆಂಗಳೂರಿನಲ್ಲಿ ನಡೆಸಲು ಅಗತ್ಯ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1313

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀಮತಿ ಯು.ಎಸ್. ಪಾರ್ವತಿ, ಪ್ರಾಣಿಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು - ಇವರಿಗೆ ವಿಧಿಸಿರುವ ದಂಡನೆಯನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ 13 ಡಿಸಿಇ 99, ದಿನಾಂಕ: 13.02.2003.

2) ಶ್ರೀಮತಿ ಯು.ಎಸ್. ಪಾರ್ವತಿ ಅವರು ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿದ ಅಪೀಲು ಮನವಿ ದಿ: 12.05.2003.

**ಪ್ರಸ್ತಾವನೆ:**

ಶ್ರೀಮತಿ ಯು.ಎಸ್. ಪಾರ್ವತಿ, ಪ್ರಾಣಿಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 03.08.1998 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದರ ಹಿನ್ನೆಲೆಯಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲಾಗಿತ್ತು. ವಿಚಾರಣೆಯಲ್ಲಿ ಆರೋಪಿತರ ವಿರುದ್ಧದ ಆರೋಪಗಳು ರುಜುವಾತಾಗಿರುತ್ತದೆಂದು ವರದಿ ಮಾಡಿದ್ದರಿಂದ, ವಿಚಾರಣಾ ವರದಿಯನ್ವಯ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 8(viii) ರಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ಕಠಿಣ ದಂಡನೆಯನ್ನು ಸದರಿ ಉಪನ್ಯಾಸಕರಿಗೆ ವಿಧಿಸಿ ಮೇಲೆ ಓದಲಾದ (1)ರ ದಿನಾಂಕ: 13.02.2003 ರಲ್ಲಿ ಆದೇಶವನ್ನು ಹೊರಡಿಸಲಾಗಿತ್ತು.

ಈ ಆದೇಶದಿಂದ ಭಾದಿತವಾದ ಶ್ರೀಮತಿ ಯು.ಎಸ್. ಪಾರ್ವತಿ ಅವರು ಮೇಲೆ ಓದಲಾದ (2)ರ ದಿನಾಂಕ: 12.05.2003 ರಂದು ಗೌರವಾನ್ವಿತ ರಾಜ್ಯಪಾಲರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 18 ರಡಿಯಲ್ಲಿ ಅಪೀಲು ಸಲ್ಲಿಸಿ, ಸರ್ಕಾರದ ಈ ತೀರ್ಮಾನವನ್ನು ಪುನರ್ ಪರಿಶೀಲಿಸುವಂತೆ ಕೋರಿದ್ದಾರೆ. ಗೌರವಾನ್ವಿತ ರಾಜ್ಯಪಾಲರು ಶ್ರೀಮತಿ ಯು.ಎಸ್. ಪಾರ್ವತಿ ಅವರಿಗೆ ನೀಡಲಾಗಿದ್ದ ಶಿಕ್ಷೆಯನ್ನು ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

"Agreed on compassionate grounds"

ಇದರಂತೆ ಮೇಲೆ ಉಲ್ಲೇಖ (1) ರಲ್ಲಿ ಶ್ರೀಮತಿ ಯು.ಎಸ್. ಪಾರ್ವತಿ, ಪ್ರಾಣಿಶಾಸ್ತ್ರ ಉಪನ್ಯಾಸಕರು ಇವರನ್ನು ಸೇವೆಯಿಂದ ವಜಾಗೊಳಿಸಿ ವಿಧಿಸಲಾಗಿದ್ದ ದಂಡನೆಯನ್ನು ಮಾರ್ಪಡಿಸಿ ಈ ಕೆಳಕಂಡಂತೆ ನಿರ್ಣಯಿಸಿ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 125 ಡಿಸಿಇ 2003, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳಿಂದಾಗಿ ಶ್ರೀಮತಿ ಯು.ಎಸ್. ಪಾರ್ವತಿ, ಪ್ರಾಣಿಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಇಡಿ 132 ಡಿಸಿಇ 99, ದಿನಾಂಕ: 13.02.2003 ರಲ್ಲಿ ಸೇವೆಯಿಂದ ವಜಾಗೊಳಿಸಿ ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ ಕೆಳಕಂಡಂತೆ ಆದೇಶಿಸಿದೆ:-

(1) ಅವರು ಸರ್ಕಾರಿ ಸೇವೆಗೆ ಗೈರುಹಾಜರಾದ ದಿನಾಂಕ: 03.08.98 ರಿಂದ 10.11.2002 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958 ನಿಯಮಗಳಡಿ ಅವರ ಹಕ್ಕಿನಲ್ಲಿರುವ ರಜೆಯನ್ನು ವೈದ್ಯಕೀಯ ಕಾರಣಗಳ ಮೇಲೆ ರಜೆಯೆಂದು ಪರಿಗಣಿಸಲು ಮತ್ತು ರಜೆ ಲಭ್ಯವಿಲ್ಲದಿದ್ದಲ್ಲಿ ರಜೆ ಲಭ್ಯವಿಲ್ಲದೇ ಕಡಿಮೆ ಬೀಳುವ ಅವಧಿಗೆ ಇ.ಓ.ಎಲ್. ಎಂದು ಪರಿಗಣಿಸಲು ಆದೇಶಿಸಿದೆ.

(2) ದಿನಾಂಕ: 11.11.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 195(1)(ಎ)ರ ಅಡಿಯಲ್ಲಿ ಸ್ವಯಂ ಸೇವಾ ನಿವೃತ್ತಿ ಹೊಂದಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 1314

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**ವಿಷಯ:** ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಾಮೂಲ್ ಪೇಟೆ, ಬೆಂಗಳೂರು ಈ ಕಟ್ಟಡದ ನೆಲಮಹಡಿಯ ಗುತ್ತಿಗೆ ಹಕ್ಕುಗಳನ್ನು (Lease hold rights) ಒಳಗುತ್ತಿಗೆ/ಒಳಬಾಡಿಗೆ (sublet/sublease) ನೀಡಲು ಮೆಸರ್ಸ್ ಮಹಾರಾಜ ಬಿಲ್ಡ್‌ಟೆಕ್ ಅಂಡ್ ಡೆವಲಪರ್ಸ್ ಅವರಿಗೆ ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಡಿ 183 ಯೋಸಕ 2000, ದಿನಾಂಕ: 12.8.2002.
2) ಡೆವಲಪ್‌ಮೆಂಟ್ ಅಗ್ರಿಮೆಂಟ್ ದಿನಾಂಕ: 1.1.2003.
3) ಪತ್ರದ ಸಂಖ್ಯೆ: ಯೋ.ಕ(3)ಪ್ರಾಶಾಕ/ವಾಣಿಜ್ಯ ಸಂಕೀರ್ಣ 51/2000-08 ದಿನಾಂಕ: 16.7.2005.
4) ಪತ್ರದ ಸಂಖ್ಯೆ: ಇಡಿ 32 ಯೋಸಕ 2005, ದಿನಾಂಕ: 27.7.2005.
5) ಪತ್ರದ ಸಂಖ್ಯೆ: ಯೋ.ಕ.(3) ಪ್ರಾಶಾಕ/ವಾಣಿಜ್ಯ ಸಂಕೀರ್ಣ 51/2000-01, ದಿನಾಂಕ: 18.8.2005.

**ಪ್ರಸ್ತಾವನೆ:**

ಬೆಂಗಳೂರು ಮಾಮೂಲ್ ಪೇಟೆಯಲ್ಲಿನ ನಿವೇಶನ ಸಂಖ್ಯೆ 38 ಮತ್ತು 39 ರಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆಯ ನಿವೇಶನದಲ್ಲಿ ವಾಹನ ನಿಲ್ದಾಣದ ಕೆಳ ಅಂತಸ್ತು, ವಾಣಿಜ್ಯ ಉದ್ದೇಶದ ನೆಲ ಅಂತಸ್ತು ಹಾಗೂ ಶಾಲೆಗಾಗಿ ಮೊದಲನೇ ಮತ್ತು ಎರಡನೇ ಅಂತಸ್ತು ಹೀಗೆ ಒಟ್ಟು 4 ಅಂತಸ್ತುಗಳ ಶಾಲಾ ಕಟ್ಟಡ ಸಂಕೀರ್ಣವನ್ನು ಸಂಕೀರ್ಣವನ್ನು ನಿರ್ಮಿಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ: 12.8.2002ರ ಸರ್ಕಾರಿ ಆದೇಶದಲ್ಲಿ ಮಹಾರಾಜ ಬಿಲ್ಡ್‌ಟೆಕ್ ಮತ್ತು ಡೆವಲಪರ್ಸ್, ನಂ.107-108, ಜಲಶಾಂಭವಿ ಕಾಂಪ್ಲೆಕ್ಸ್, 1ನೇ ಮೇನ್ ರಸ್ತೆ, ಗಾಂಧಿನಗರ, ಬೆಂಗಳೂರು ಅವರಿಗೆ ಅನುಮತಿ ನೀಡಲಾಯಿತು. ಸದರೀ ಆದೇಶದಲ್ಲಿ ನೀಡಿದ ನಿರ್ದೇಶನದಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಅವರು ಮಹಾರಾಜ ಬಿಲ್ಡ್‌ಟೆಕ್ ಅಂಡ್ ಡೆವಲಪರ್ಸ್‌ರೊಡನೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 1.1.2003ರ ಡೆವಲಪ್‌ಮೆಂಟ್ ಅಗ್ರಿಮೆಂಟ್ ಮಾಡಿಕೊಂಡರು. ಅದರನ್ವಯ ಶಾಲಾ ಕಟ್ಟಡವನ್ನು ಕೆಡವಿ ಹೊಸ ಸಂಕೀರ್ಣವನ್ನು ನಿರ್ಮಿಸುವ ಸಲುವಾಗಿ ಸ್ವತ್ತನ್ನು ಬಿಲ್ಡರ್‌ಗೆ ಹಸ್ತಾಂತರಿಸಲಾಯಿತು. ಸದರೀ ಅಗ್ರಿಮೆಂಟ್‌ನ ನಿಬಂದನೆ 5 ಮತ್ತು 9 ಈ ಕೆಳಕಂಡಂತಿವೆ.

5. The schedule A property shall be held and enjoyed by the BUILDER on lease for a period restricted upto 30 years, from the date of handing over of the ground floor. After completion of the said 30 years lease period the Builder shall hand over the possession of the entire schedule property to the Owner.

9. The builder has no right to sell or lease or dispose of the schedule A property (ground floor) with out the permission of the owner.

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 16.7.2005ರ ಪತ್ರದಲ್ಲಿ ಸದರೀ ಶಾಲಾ ಸಂಕೀರ್ಣವನ್ನು ಕಟ್ಟಿ ಮುಗಿಸಿರುವುದರಿಂದ ಡೆವಲಪ್‌ಮೆಂಟ್ ಅಗ್ರಿಮೆಂಟ್‌ನ 24ನೇ ನಿಬಂಧನೆಯ ರೀತ್ಯ ಕಟ್ಟಡವನ್ನು ಶಿಕ್ಷಣ ಇಲಾಖೆಗೆ ವಹಿಸಿಕೊಳ್ಳಲು ಸರ್ಕಾರದ ಅನುಮತಿ ಕೋರಿದರು. ಇದನ್ನು ಪರಿಶೀಲಿಸಿ ಮೇಲೆ (4) ರಲ್ಲಿ ಓದಲಾದ ದಿನಾಂಕ: 27.7.2005ರ ಸರ್ಕಾರಿ ಪತ್ರದಲ್ಲಿ ಕಟ್ಟಡವನ್ನು ಡೆವಲಪ್‌ಮೆಂಟ್ ಅಗ್ರಿಮೆಂಟ್‌ನ 24ನೇ ನಿಬಂಧನೆಯನ್ವಯ ಸ್ವಾಧೀನಕ್ಕೆ ತೆಗೆದುಕೊಳ್ಳಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರಿಗೆ ಅನುಮತಿ ನೀಡಲಾಯಿತು. ಅದರನ್ವಯ ಸದರೀ ಕಟ್ಟಡ ಸಂಕೀರ್ಣವನ್ನು ದಿನಾಂಕ: 29.7.2005 ರಂದು ಆಯುಕ್ತರ ಪರವಾಗಿ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ದಕ್ಷಿಣ ಜಿಲ್ಲೆ ಅವರು ಸ್ವಾಧೀನಕ್ಕೆ ಪಡೆದರು ಹಾಗೂ ನೆಲಮಹಡಿಯನ್ನು ಬಿಲ್ಡರ್ಸ್‌ಗೆ ಹಸ್ತಾಂತರಿಸಿದರು.

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (5) ರಲ್ಲಿ ಓದಲಾದ ದಿನಾಂಕ: 18.8.2005ರ ತಮ್ಮ ಪತ್ರದಲ್ಲಿ ಮಹಾರಾಜ ಬಿಲ್ಡ್‌ಟೆಕ್ ಅಂಡ್ ಡೆವಲಪರ್ಸ್ ಅವರು ಶಾಲಾ ಕಟ್ಟಡ ಸಂಕೀರ್ಣದ ನಿರ್ಮಾಣವನ್ನು ಪೂರೈಸಿದ್ದು ಕೆಲಸವು ತೃಪ್ತಿಕರವಾಗಿದೆ ಹಾಗೂ ಬೆಂಗಳೂರು ಮಹಾನಗರ ಪಾಲಿಕೆಯು ಆಕ್ಯುಪೆನ್ಸಿ ಸರ್ಟಿಫಿಕೇಟ್ ನೀಡಿದೆ. ಬಿಲ್ಡರ್ಸ್ ಸಂಸ್ಥೆಯು ಈ ಸಂಕೀರ್ಣದ ನಿರ್ಮಾಣಕ್ಕಾಗಿ ಹೂಡಿರುವ ಬಂಡವಾಳವನ್ನು ಸಮರ್ಥವಾಗಿ ವಾಪಸ್ ಪಡೆಯಲು ಅವಕಾಶವಾಗುವಂತೆ ಡೆವಲಪ್‌ಮೆಂಟ್ ಅಗ್ರಿಮೆಂಟ್‌ನ ನಿಬಂಧನೆ 9 ರನ್ವಯ ಸರ್ಕಾರದ ಅಧಿಕಾರವನ್ನು ಚಲಾಯಿಸಿ ಸಂಕೀರ್ಣದ ನೆಲಮಹಡಿಯನ್ನು ಒಳಗುತ್ತಿಗೆ/ಒಳಬಾಡಿಗೆ ನೀಡಲು ಬಿಲ್ಡರ್ಸ್‌ಗೆ ಅನುಮತಿ ನೀಡುವಂತೆ ಕೋರಿದ್ದಾರೆ. ಸದರೀ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 32 ಯೋಸಕ 2004, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2005**
**(ಇಡಿ 45 ಸ್ಕೀಮರ (ಯೂನಿಕ್) 2005, ದಿನಾಂಕ: 19.9.2005)**

ಮಹಾರಾಜ ಬಿಲ್ಡ್‌ಟೆಕ್ ಅಂಡ್ ಡೆವಲಪರ್ಸ್ ಬೆಂಗಳೂರು ಅವರೊಡನೆ ಸರ್ಕಾರದ ಪರವಾಗಿ ದಿನಾಂಕ: 1.1.2003 ರಂದು ಮಾಡಿಕೊಂಡ ಡೆವಲಪ್‌ಮೆಂಟ್ ಅಗ್ರಿಮೆಂಟ್‌ನ ನಿಬಂಧನೆ 9 ರಲ್ಲಿ ವಿಹಿತವಾದ ಅಧಿಕಾರದನ್ವಯ ಸರ್ಕಾರವು ಬೆಂಗಳೂರು ಮಾಮೂಲ್ ಪೇಟೆ ನಿವೇಶನ ಸಂಖ್ಯೆ 38 ಮತ್ತು 39 ರಲ್ಲಿ ನಿರ್ಮಿಸಲಾದ ಬಹುಮಹಡಿ ಶಾಲಾ ಸಂಕೀರ್ಣದಲ್ಲಿ ಅವರಿಗೆ ಹಸ್ತಾಂತರಿಸಲ್ಪಟ್ಟ ನೆಲಮಹಡಿಗೆ ಸಂಬಂಧಿಸಿದ ಗುತ್ತಿಗೆ ಹಕ್ಕುಗಳನ್ನು (Leasehold rights) ನ್ನು ಒಳಗುತ್ತಿಗೆ/ಒಳಬಾಡಿಗೆಗೆ (sublease) ನೀಡಲು ಮೆಸರ್ಸ್ ಮಹಾರಾಜ ಬಿಲ್ಡ್‌ಟೆಕ್ ಅಂಡ್ ಡೆವಲಪರ್ಸ್ ನಂ.107-108, ಜಲಶಾಂಭವಿ ಕಾಂಪ್ಲೆಕ್ಸ್, 1ನೇ ಮೇನ್ ರಸ್ತೆ, ಗಾಂಧಿನಗರ, ಬೆಂಗಳೂರು ಅವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಅನುಮತಿ ನೀಡಿದೆ. ಈ ಅನುಮತಿಯು ಲೀಸ್ ಅವಧಿಯಾದ 30 ವರ್ಷಗಳ ಅವಧಿಯಲ್ಲಿ ಮಾತ್ರ ಜಾರಿಯಲ್ಲಿರುತ್ತದೆ. ಸಬ್‌ಲೀಸ್ ಮಾಡುವಾಗ ಸಂಸ್ಥೆಯು ಶಾಲಾ ಆವರಣಗಳಲ್ಲಿ ವಿವಿಧ ಇಲಾಖೆಗಳು ಹೊಡಿಸಲಾಗಿರುವ ನಿಷಿದ್ಧವಾದ ಸಾಮಗ್ರಿಗಳ (ಉದಾ: ಸ್ಫೋಟಕ ವಸ್ತುಗಳ ಮಾರಾಟ, ಮದ್ಯ ಸರಬರಾಜು ಅಂಗಡಿಗಳು ಇತ್ಯಾದಿ) ಅಂಗಡಿಗಳನ್ನು ತೆರೆಯಲು ನೀಡಬಾರದು. ಸಬ್‌ಲೀಸ್‌ಗೆ ಲೀಸ್ ಪಡೆದ ಸಂಸ್ಥೆಯು ನೀಡಿದರೂ ಕಟ್ಟಡದ ಸಂಪೂರ್ಣ ಮಾಲೀಕತ್ವವನ್ನು ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯೇ ಹೊಂದಿರುತ್ತದೆ. ಲೀಸ್ ಅವಧಿ ಮುಗಿದ ನಂತರ ಇಡೀ ಸ್ವತ್ತು ಸರ್ಕಾರಕ್ಕೆ ಹಸ್ತಾಂತರಿಸಲ್ಪಡುತ್ತದೆ. ಉಳಿದಂತೆ ದಿನಾಂಕ: 1.1.2003ರ ಡೆವಲಪ್‌ಮೆಂಟ್ ಅಗ್ರಿಮೆಂಟ್‌ನ ನಿಬಂಧನೆ 10, 11, 12, 13, 16, 23, ಇವುಗಳು ಸಂಪೂರ್ಣ ಲೀಸ್ ಅವಧಿಯಲ್ಲೂ ಅನ್ವಯವಾಗುತ್ತದೆ.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಅ.ಟಿ. ಸಂಖ್ಯೆ: ಇಡಿ 761 ಆಂ ಆಸ 2005, ದಿನಾಂಕ: 19.9.2005 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1316

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## EDUCATION SECRETARIAT

**Subject:** Nomination of Officers to Regional Training Course at Trivendrum from 5th to 7th October 2005 - Order regarding.

**Read:** D.O. Letter No.F-10-3/2005/Stat. Dated: 1st September 2005. from Sri S.S. Malkani Deputy Director Planning, M.H.R.D. Department of Secondary and Higher Education, G.O.I. New Delhi.

**PREAMBLE:**

The Deputy Director, M.H.R.D. Government of India in his letter dated: 1.9.2005 read above, has requested to send the list of names to attend the regional training course on Educational Statistics, to be held in Trivendrum from 5th to 7th October 2005, Government has considered this proposal and orders as follows.

**GOVERNMENT ORDER No. ED 421 YoSaKa 2005, Bangalore, Dated: 16th September 2005**
**[ED: 44 R&I (Unique) 2005, Dated: 16.09.2005]**

Government is pleased to Nominate the following officers working under Education Department to attend the Regional Training Course on Educational Statistics to be held at Trivendrum From 5th to 7th October 2005.

1. Sri Ramesh Upadhyaya
   Assistant Director (Statistics)
   Department of Technical Education, Bangalore.
2. Sri Bhagyavan,
   Information Officer
   Office of the Commissioner of Collegiate Education, Bangalore.
3. Sri T.S. Govinda Rao
   Assistant Director (Statistics)
   D.S.E.R.T., Bangalore.

The above officers shall carry pending Statistical Data of their respective Departments as per the Statement appended to this Government Order. The Officers shall also carry blank copies of forms ES-Series [I II III and IV] of both elementary and higher education.

The above officers are eligible to draw TA and DA as per K.C.S.R.

They shall report at Conference Hall at Government Guest House, Thycaud, Trivendrum.

By Order and in the Name of the Governor of Karnataka,

**K. SRIKANTESWARA**

P.R. 1317

Special Officer and Ex-Officiao

Joint Secretary to Government, Education Department [Planning]

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ತಿದ್ದೋಲೆ**

**ಸಂಖ್ಯೆ: ಸಿಆಸುಇ 97 ಸಅಸೇ 2005, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2005**

ಶ್ರೀ ಎನ್.ಎಸ್. ಬೋಸರಾಜು, ಶಾಸಕರು ಇವರನ್ನು ಮಾನ್ಯ ಮುಖ್ಯ ಮಂತ್ರಿಯವರ ರಾಜಕೀಯ ಕಾರ್ಯದರ್ಶಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ನೇಮಿಸುವ ಸಂಬಂಧದಲ್ಲಿ ಹೊರಡಿಸಲಾಗಿರುವ ಅಧಿಸೂಚನೆ ಸಂಖ್ಯೆ: ಸಿಆಸುಇ 97 ಸಅಸೇ 2005, ದಿನಾಂಕ: 19.3.2005 ರಲ್ಲಿ ಇವರ ಹೆಸರನ್ನು 'ಶ್ರೀ ಎನ್. ಬೋಸರಾಜು' ಎಂಬುದಕ್ಕೆ ಬದಲಾಗಿ 'ಶ್ರೀ ಎನ್.ಎಸ್. ಬೋಸರಾಜು' ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1318

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀಮತಿ ಸಗುಣಾಬಾಯಿ, ಅ.ಕಾ. ಸಿಆ.ಸು.ಇಲಾಖೆ (ಜನಸ್ಪಂದನಾ ಕೋಶ) ಇವರು ದಿನಾಂಕ: 12.8.2005 ರಂದು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಬಗ್ಗೆ ಒಂದು ದಿನ ವೇತನ ರಹಿತ ರಜೆಯಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಸಹ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಜನಸ್ಪಂದನಾ ಕೋಶ) ಇವರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 83 ಯೋಮಸ 2005, ದಿನಾಂಕ: 30.8.2005.

**ಪ್ರಸ್ತಾವನೆ:**

ಮೇಲೆ ಓದಲಾದ ಸಹ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಜನಸ್ಪಂದನಾ ಕೋಶ) ಇವರ ಅಧಿಕೃತ ಜ್ಞಾಪನ ದಿನಾಂಕ: 30.8.2005 ರಲ್ಲಿ ಅದೇ ವಿಭಾಗದಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಸಗುಣಾಬಾಯಿ, ಇವರು ದಿನಾಂಕ: 12.8.2005 ರಂದು ಪೂರ್ವಾನುಮತಿಯಾಗಿ ರಜೆ ಮಂಜೂರಾತಿಯನ್ನು ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವರೆಂದು ತಿಳಿಸಿ ಸದರಿ ದಿನಾಂಕದಂದು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಒಂದು ಪ್ರಮುಖವಾದ ಸಭೆ ಏರ್ಪಡಿಸಿದ್ದು, ಈ ಸಭೆಗೆ ಶ್ರೀಮತಿ ಸಗುಣಾಬಾಯಿ, ಅಧೀನ ಕಾರ್ಯದರ್ಶಿ ಇವರು ಹಾಜರಿರಬೇಕೆಂದು ಪ್ರಧಾನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಜನಸ್ಪಂದನಾ ಕೋಶ) ಹಾಗೂ ಸಹ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಜನಸ್ಪಂದನಾ ಕೋಶ) ಇವರು ಸೂಚನೆ ನೀಡಿದ್ದರು. ಇವರು ರಜೆಯ ಮಂಜೂರಾತಿ ಪಡೆಯದೆ ಹಾಗೂ ಮೇಲಾಧಿಕಾರಿಗಳ ಪೂರ್ವಾನುಮತಿ ಪಡೆಯದೆ ಸದರಿ ದಿನಾಂಕದಂದು ಕಛೇರಿಗೆ ಗೈರು ಹಾಜರಾಗಿರುವ ಮೇರೆಗೆ ಇವರು ಸಲ್ಲಿಸಿದ ಸಾಂದರ್ಭಿಕ ರಜೆಯನ್ನು ತಿರಸ್ಕರಿಸಿ ಇವರ ಗೈರು ಹಾಜರಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ರಡಿಯಲ್ಲಿ ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ವೇತನ ರಹಿತ ರಜೆ ಎಂದು ಆದೇಶಿಸಿರುತ್ತಾರೆ.

ವಿಷಯವನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 217 ಸಆರ 2005, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2005**

ಶ್ರೀಮತಿ ಸಗುಣಾಬಾಯಿ, ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಜನಸ್ಪಂದನಾ ಕೋಶ) ಇವರು ದಿನಾಂಕ: 12.8.2005 ರಂದು ರಜೆಯ ಮಂಜೂರಾತಿ ಪಡೆಯದೆ ಹಾಗೂ ಮೇಲಾಧಿಕಾರಿಗಳ ಪೂರ್ವಾನುಮತಿ ಪಡೆಯದೆ ಸದರಿ ದಿನಾಂಕದಂದು ಕಛೇರಿಗೆ ಅನಧಿಕೃತ ಗೈರು ಹಾಜರಾಗಿರುವ ಮೇಲಿನ ದಿನಾಂಕಕ್ಕೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ. ಹಾಗೂ ಸದರಿ ನಿಯಮದ ಅನುಸಾರ ಈ ಗೈರು ಹಾಜರಿಯ ಒಂದು ದಿನವನ್ನು ಅವರ ಖಾತೆಯಲ್ಲಿ ಜಮೆ ಇರುವ ಅರ್ಧ ವೇತನ ರಜೆಗೆ ಖರ್ಚು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1319 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**PERSONNEL AND ADMINISTRATIVE REFORMS SECRETARIAT**

**CORRIGENDUM No. DPAR 10 SMR 2005, Bangalore, Dated: 17th September 2005**

In Notification No. DPAR 1 SMR 2004, dated: 27.11.2004 for the words "Nethradhama Eye Hospital, Jayanagar, Bangalore" appearing in Sl.No.92 under item I the words "Nethradhama Super Speciality Eye Hospital, Jayanagar, Bangalore-560 082" shall be and shall always deemed to have been substituted and in Notification No. DPAR 10 SMR 2005 dated: 30.7.2005 for the words "Akkur Speciality Hospital, Koramangala, Bangalore" appearing in Sl.No.125 under item I the words "Acura Speciality Hospital, Koramangala, Bangalore-560 095" shall be and shall always deemed to have been substituted.

By Order and in the name of the Governor of Karnataka,

**K. RAGHURAM BHANDARY**

P.R. 1320 Under Secretary to Government,

Department of Personnel and Administrative Reforms (Services-2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದೋಲೆ ಸಂಖ್ಯೆ: ಸಿಆಸುಇ 56 ಸಸಿವಿ 2005, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2005**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 52 ಸಸಿವಿ 2005, ದಿನಾಂಕ: 8.8.2005 ರಲ್ಲಿನ ಆದೇಶದ ಭಾಗದಲ್ಲಿನ 'ಅಂತರ ಜಲ ವಿವಾದ' ಎಂದಿರುವುದನ್ನು 'ಅಂತರ ರಾಜ್ಯ ಜಲ ವಿವಾದ' ಎಂದು ಪರಿಷ್ಕರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1321 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಭಾರಿ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಹಾಗೂ ಮೂಲಭೂತ ಸೌಲಭ್ಯ ಸಚಿವರ ಆಪ್ತ ಶಾಖೆಯಲ್ಲಿ ಉನ್ನತೀಕರಿಸಿರುವ ಗ್ರೂಪ್ 'ಸಿ' ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 59 ಸಸಿವಿ 2004 (1) ದಿನಾಂಕ: 6.9.2004.
2. ಟಿಪ್ಪಣಿ ಸಂಖ್ಯೆ: ಎಲ್‌ಎಂ 1/951/2005-06, ದಿನಾಂಕ: 16.7.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 6.9.2004ರ ಸರ್ಕಾರದ ಆದೇಶದಲ್ಲಿ ಭಾರಿ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಹಾಗೂ ಮೂಲಭೂತ ಸೌಲಭ್ಯ ಸಚಿವರ ಆಪ್ತ ಶಾಖೆಯಲ್ಲಿ ಒಂದು ವರ್ಷದ ಅವಧಿಯವರೆಗೆ ಅಥವಾ ಸಚಿವರ ಪದಾವಧಿಯವರೆಗೆ

ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಒಂದು ಗ್ರೂಪ್ 'ಸಿ' ಹುದ್ದೆಯನ್ನು ರೂ.7400-13120ರ ವೇತನ ಶ್ರೇಣಿಯ ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಭಾರಿ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಹಾಗೂ ಮೂಲಭೂತ ಸೌಲಭ್ಯ ಸಚಿವರ ಉನ್ನತೀಕರಿಸಿರುವ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ವಿ.ಆರ್. ಗಾಯಕ್‌ವಾಡ್ ರವರ ಸೇವೆಯನ್ನು ದಿನಾಂಕ: 6.9.2005 ರಿಂದ ಸಚಿವರ ಪದಾವಧಿಯವರೆಗೆ ವಿಸ್ತರಿಸಿ ಆದೇಶಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2005, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2005**

ಭಾರಿ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಹಾಗೂ ಮೂಲಭೂತ ಸೌಲಭ್ಯ ಸಚಿವರ ಆಪ್ತ ಶಾಖೆಯಲ್ಲಿನ ಉನ್ನತೀಕರಿಸಿದ ಗ್ರೂಪ್ 'ಎ' ಹುದ್ದೆಯನ್ನು ಹಾಗೂ ಶ್ರೀ ವಿ.ಆರ್. ಗಾಯಕ್‌ವಾಡ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ಸೇವೆಯನ್ನು ದಿನಾಂಕ: 6.9.2005 ರಿಂದ ಸಚಿವರ ಪದಾವಧಿಯವರೆಗೆ ಅಥವಾ ಶ್ರೀ ವಿ.ಆರ್. ಗಾಯಕ್‌ವಾಡ್ ರವರ ಸೇವೆಯು ಸಚಿವರ ಆಪ್ತ ಶಾಖೆಯಲ್ಲಿ ಅವಶ್ಯವಿರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶ ಹೊರಡಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1248 ವೆಚ್ಚ-5, 2005; ದಿನಾಂಕ: 26.8.2005 ರಲ್ಲಿ ಸಹಮತಿಸಿರುವ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1323

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## EDUCATION SECRETARIAT

**CORREGENDUM No. ED 267 YOSAKA 2005, Bangalore, Dated: 16th September 2005**

**Subject:** CSS of IEDC-implementation in the State of Karnataka.

**Read:** 1. G.O.No. ED 247 YOSAKA 2005, dated: 2.6.2005.
[ED 22 SWIMARA (unique) 2005 dated: 2.6.2005]
2. G.O.No. ED 247 YOSAKA 2005 dated: 8.8.2005
[ED 35 SWIMARA (unique) 2005 dated: 8.8.2005]

**PREAMBLE:**

In G.O dated: 2.6.2005 read at (1) above, the entries inrespect of Zillapanchayat, Gadag vide annexure and in G.O. dated: 8.8.2005 the entries at Sl.No.2 of preamble portion and order portion shall be read as follows with effect from 2.6.2005 and 8.8.2005:-

"Shri Malatheswara Vidya Samsthe, Gajendra Gada, Gadag District".

By Order and in the Name of the Governor of Karnataka,

**K. SRIKANTESHWARA**

P.R. 1330

Special Officer & Ex-Officio

Joint Secretary to Government (Planning), Education Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರಿನ ಸರ್ಕಾರಿ ಶುಶ್ರೂಷಾ ಕಾಲೇಜಿನ ಸಹಾಯಕ ಪ್ರಾಧ್ಯಾಪಕ ಡಾ: ಬಿ.ಟಿ. ಬಸವಂತಪ್ಪರವರ ವಿರುದ್ಧ ಶಿಸ್ತಿನ ಕ್ರಮ.

**ಓದಲಾಗಿದೆ:**
1) ತಾ: 09.07.2002 ಸಂಖ್ಯೆ: ಎಂಇಎಸ್(2):11:2002-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2) ತಾ: 04.09.2002 ಸಂಖ್ಯೆ: ಆಕುಕ 161 ಎಂಎಂಇ 2002ರ ಸರ್ಕಾರಿ ಆದೇಶ.
3) ತಾ: 01.10.2002 ಸಂಖ್ಯೆ: ಎಂಇಪಿ(1):32:2001-02ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
4) ತಾ: 07.02.2003 ಸಂಖ್ಯೆ: ಆಕುಕ 438 ಎಂಎಸ್‌ಎಫ್ 2002ರ ಸರ್ಕಾರಿ ನರ್ಸಿಂಗ್ ಕಾಲೇಜಿನ ನರ್ಸಿಂಗ್ ಸಹಾಯಕ ಪ್ರಾಧ್ಯಾಪಕ ಡಾ: ಬಿ.ಟಿ. ಬಸವಂತಪ್ಪರವರಿಗೆ ಬರೆದ ಸರ್ಕಾರಿ ಪತ್ರ.
5) ತಾ: 29.04.2003 ಸಂಖ್ಯೆ: ಆಕುಕ 438 ಎಂಎಸ್‌ಎಫ್ 2002ರ ಸರ್ಕಾರಿ ಆದೇಶ.
6) ತಾ: 21.01.2003 ರಂದು ಸ್ವೀಕೃತವಾದ ಡಾ: ಬಿ.ಟಿ. ಬಸವಂತಪ್ಪರವರ ಅರ್ಜಿ.
7) ತಾ: 19.09.2003 ಸಂಖ್ಯೆ: ಆಕುಕ 140 ಎಂಎಂಸಿ 2003ರ ಅಧಿಸೂಚನೆ.
8) ತಾ: 08.03.2004 ಸಂಖ್ಯೆ: ಆಕುಕ 178 ಎಂಎಂಸಿ 2004ರ ಕಾರಣ ಕೇಳುವ ನೋಟೀಸ್.
9) ತಾ: 30.03.2004 ರಂದು ಸ್ವೀಕೃತವಾದ ಡಾ: ಬಿ.ಟಿ. ಬಸವಂತಪ್ಪರವರ ಹೇಳಿಕೆ.
10) ತಾ: 22.05.2004 ಸಂಖ್ಯೆ: ಆಕುಕ 178 ಎಂಎಂಸಿ 2004ರ ಸರ್ಕಾರಿ ಆದೇಶ.
11) ತಾ: 25.11.2004 ರಂದು ಸ್ವೀಕೃತವಾದ ವಿಚಾರಣಾ ವರದಿ.
12) ತಾ: 15.02.2005 ಸಂಖ್ಯೆ: ಆಕುಕ 178 ಎಂಎಂಸಿ 2004ರ ಎರಡನೇ ಕಾರಣ ಕೇಳುವ ನೋಟೀಸ್.
13) ತಾ: 18.02.2005 ರಂದು ಸ್ವೀಕೃತವಾದ ಡಾ: ಬಿ.ಟಿ. ಬಸವಂತಪ್ಪರವರ ಹೇಳಿಕೆ.

**ಪೀಠಿಕೆ:**

1. ಬೆಂಗಳೂರಿನ ಸರ್ಕಾರಿ ನರ್ಸಿಂಗ್ ಕಾಲೇಜಿನ ಸಹಾಯಕ ಪ್ರಾಧ್ಯಾಪಕ ಡಾ: ಬಿ.ಟಿ. ಬಸವಂತಪ್ಪನವರು ಮಂಗಳೂರಿನ ಶ್ರೀದೇವಿ ನರ್ಸಿಂಗ್ ಕಾಲೇಜಿಗೆ ಸಂಯೋಜನೆ ಮಂಜೂರು ಮಾಡುವ ಪೂರ್ವದಲ್ಲಿ ಲಭ್ಯವಿರುವ ಮೂಲಭೂತ ಸೌಕರ್ಯಗಳು ಹಾಗೂ ಕ್ಲಿನಿಕಲ್ ಸೌಲಭ್ಯದ ಪರಿವೀಕ್ಷಣೆಯನ್ನು ನಡೆಸಿ ಒಂದು ವರದಿಯನ್ನು ಸಲ್ಲಿಸಿದ್ದರು. ಅದರ ವರದಿಯನ್ನು ಆಧರಿಸಿ ತಾ: 04.09.2002 ಸಂಖ್ಯೆ: ಆಕುಕ 161 ಎಂಎಂಇ 2002ರ ಸರ್ಕಾರಿ ಆದೇಶದಲ್ಲಿ 40 ಪ್ರವೇಶಮಿತಿಯ ಬಿಎಸ್ಸಿ ನರ್ಸಿಂಗ್ ಕೋರ್ಸಿನೊಂದಿಗೆ ಶ್ರೀದೇವಿ ನರ್ಸಿಂಗ್ ಕಾಲೇಜಿಗೆ ಸಂಯೋಜನೆಯನ್ನು ಮಂಜೂರು ಮಾಡಲಾಗಿತ್ತು.

2. ತಾ: 01.10.2002ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ಮೇಲ್ಕಂಡ ಕಾಲೇಜಿಗೆ ವೆನ್‌ಲಾಕ್ ಆಸ್ಪತ್ರೆಯಲ್ಲಿ ಮತ್ತು ಲೇಡಿಘೋಷನ್ ಆಸ್ಪತ್ರೆಗಳಲ್ಲಿ ಕ್ಲಿನಿಕಲ್ ಸೌಲಭ್ಯವನ್ನು ಒದಗಿಸಲು ಒಂದು ವರ್ಷದ ಅವಧಿಗೆ ಸೀಮಿತಗೊಳಿಸಿ ಸರ್ಕಾರದ ಅನುಮೋದನೆಯನ್ನು ಕೋರಲಾಗಿತ್ತು.

3. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಸ್ಥಳೀಯ ವಿಚಾರಣಾ ಸಮಿತಿ ಸಲ್ಲಿಸಿದ ವರದಿಯಲ್ಲಿ ಮೇಲ್ಕಂಡ ಕಾಲೇಜು ಏಳು ಆಸ್ಪತ್ರೆ - ನರ್ಸಿಂಗ್ ಹೋಂಗಳೊಂದಿಗೆ ಕ್ಲಿನಿಕಲ್ ಸೌಲಭ್ಯಕ್ಕಾಗಿ tie-up ಮಾಡಿಕೊಳ್ಳಲಾಗಿತ್ತು ಎಂದು ಸ್ಪಷ್ಟವಾಗಿ ನಮೂದಿಸಿತ್ತು. ಆದರೆ ಡಾ: ಬಿ.ಟಿ. ಬಸಡವಂತಪ್ಪರವರ ವರದಿಯಲ್ಲಿ "ಆಸ್ಪತ್ರೆಗಳು ಮತ್ತು ಆರೋಗ್ಯ ಕೇಂದ್ರಗಳಿಂದ ಅನುಮತಿ ಪಡೆಯಲಾಗಿದೆ" ಎಂದು ನಮೂದಿಸಲಾಗಿದೆ. ಅವರ ವರದಿ ತಪ್ಪು ಮಾಹಿತಿಯನ್ನು ಒಳಗೊಂಡಿತ್ತು. ಆದಕಾರಣ ಅವರ ವಿವರಣೆಯನ್ನು ಪಡೆದ ನಂತರ ಅದು ತೃಪ್ತಿಕರವಾಗಿರಲಿಲ್ಲದ ಕಾರಣ ತಾ: 24.06.2003ರ ಸಂಖ್ಯೆ: ಆಕುಕ 438 ಎಂಎಸ್‌ಎಫ್ 2002ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು. ನಂತರ 1957ರ KCS(CCA) ನಿಯಮಾವಳಿಯ 11ನೇ ನಿಯಮದಡಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ದೋಷಾರೋಪಣಾ ಪಟ್ಟಿ, ದುರ್ನಡತೆ ಅಥವಾ ದುರ್ವರ್ತನೆಗಳ, ಹೇಳಿಕೆ ಹಾಗೂ ದೋಷಾರೋಪಣೆಗಳನ್ನು ಸಮರ್ಥಿಸುವ ದಸ್ತಾವೇಜುಗಳ ಪಟ್ಟಿ ಮತ್ತು ಸಾಕ್ಷಿಗಳ ಪಟ್ಟಿಯನ್ನು ಜಾರಿ ಮಾಡಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು ಪಡೆಯಲಾಗಿತ್ತು. ಆದರೆ ಅದು ಸಮರ್ಥನೀಯವಾಗಿರಲಿಲ್ಲ ಹಾಗೂ ಅಂಗೀಕಾರಾರ್ಹ ವಾಗಿರಲಿಲ್ಲ. ಆದುದರಿಂದ ತಾ: 22.05.2004 ಸಂಖ್ಯೆ: ಆಕುಕ 178 ಎಂಎಂಸಿ 2004ರ ಸರ್ಕಾರಿ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಟಿ.ಎಸ್. ಪಾಲನೇತ್ರ ರವರನ್ನು ವಿಚಾರಣಾ ಪ್ರಾಧಿಕಾರಿಯಾಗಿ 11(2) ಮತ್ತು 5(5)(ಸಿ) ನಿಯಮದಡಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಮುಖ್ಯ ಆಡಳಿತಾಧಿಕಾರಿಯನ್ನು ನೇಮಿಸಲಾಗಿತ್ತು. ಈ ಮಧ್ಯೆ ಆಪಾದಿತರ ಅಮಾನತ್ತನ್ನು ತೆರವುಗೊಳಿಸಿ ತಾ: 19.09.2003ರ ಅಧಿಸೂಚನೆಯಲ್ಲಿ ಅವರ ವಿರುದ್ದದ ವಿಚಾರಣೆ ಬಾಕಿ ಇಟ್ಟು ಸರ್ಕಾರಿ ನರ್ಸಿಂಗ್ ಕಾಲೇಜಿನ ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ನೇಮಿಸಲಾಗಿತ್ತು.

4. ವಿಚಾರಣಾ ಪ್ರಾಧಿಕಾರವು 11ನೇ ನಿಯಮದಡಿ ಸವಿವರವಾದ ಇಲಾಖಾ ವಿಚಾರಣೆಯನ್ನು ನಡೆಸಿ ತಾ: 17.11.2004ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತ್ತು. ಆಪಾದಿತರ ವಿರುದ್ಧ ರೂಪಿಸಲಾಗಿದ್ದ ದೋಷಾರೋಪಣೆಯು ಸಾಬೀತಾಗಿದೆ ಎಂಬ ಫೈಂಡಿಂಗ್ಸ್‌ನ್ನು ನೀಡಲಾಗಿದೆ.

5. ತಾ: 15.02.2005 ಸಂಖ್ಯೆ: ಆಕುಕ 178 ಎಂಎಂಸಿ 2004ರ 2ನೇ ಕಾರಣ ಕೇಳುವ ನೋಟೀಸಿನಲ್ಲಿ ವಿಚಾರಣಾ ವರದಿಯಲ್ಲಿನ ಫೈಂಡಿಂಗ್ಸ್‌ನ್ನು ಏಕೆ ಅಂಗೀಕರಿಸಬಾರದು ಎಂಬುದರ ಮೇಲೆ ಉತ್ತರವನ್ನು ನೀಡುವಂತೆ ಅವರಿಗೆ ಸೂಚಿಸಲಾಗಿತ್ತು. ಅವರು ಅದಕ್ಕೆ ಪ್ರತಿಕ್ರಯಿಸಿ ಸಲ್ಲಿಸಿರುವ ಸವಿವರವಾದ ಉತ್ತರದ ಸಂಕ್ಷಿಪ್ತತೆಯು ಈ ಮುಂದಿನಂತಿದೆ.

6. He had no intention whatsoever to mis-lead the government not only in regard to the subject in question but in the matter of discharging his duties as Assistant Professor. He was one of the Members of the Committee constituted for giving a report after inspection of Sridevi Nursing College. Since there was already recommendation from the District Surgeon, Wenlock Hospital on the assurance that the give permission would be granted under the bonafide belief he had given a report stating that Sridevi Nursing College would be having the facility of the services of the hospital. This report was not only signed by him but also by Sri Shivalingappa. The Principal and the Secretary, Government Nursing Examination Board. Hence there no question of mis-leading the Government in submitting a wrong fact. The charges leveled against him do not permit taking any action against him as the said report is not against any financial irregularities to the government.

7. The second charge is that he has signed the said report as Professor and not as Assistant Professor. He had already submited an explanation in this regard stating that since the report was computer typed, by over-sight instead of typing as Assistant Professor it has been typed as Professor. Without noticing the same and in the routine manner he had signed the report without any intention or oblique motive. Even in the order constituting the inspection committee comprising of himself and Sri Shivalingappa dt. 04.07.2002, his designation has been shown as Professor, which is also typographical error. By over-sight instead of mentioning as Assistant Professor, it has been mentioned as Professor which do not make any substantial difference as long as he has not been promoted as Professor. The inadvertence in not correcting the typographical error may not constitute a serious or mis-conduct. When one there are certain typographical error mistakes are bound to correct, to his mis-fortune they have occurred which are not serious and need not be taken note of. Otherwise he will be put to gread hardship. One the otherhand, not hardship or public interest suffered if these mistakes are ignored.

8. He has requested to take not of his explanation to come to a conclusion that the charges do not warrant any punishment against him as his case is being considered for the post of Professor against him may come in the way of promotion. Hence, he has requested to drop these charges to enable the DPC to consider his case for promotion as Professor. He has sought exoneration of the charges in the interest of Justice.

9. Based on the iota of evidence and other tangiable material made available in the course of the enquiry corroborated with the proof of the PWs, the Inquiry Authority has held the delinquent guilty of the charges framed against him. The imputation of charges has not been vociferously disputed by the delinquent. There are inadvertent mistakes but not with any motivation. The report of inspection held on 08.07.2002. was signed both Sri Shivalingappa and Dr. B.T. Basavanthappa. The report contains other details as well.

10. Government has considered the gravity nature and magnitude of the proven charge against the AGO and decided to impose a minor penalty of consure under rule 8(ii) of the KCS (CCA) Rules 1997.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 178 ಎಂಎಂಸಿ 2004, ಬೆಂಗಳೂರು, ದಿನಾಂಕ: 5ನೇ ಜುಲೈ 2005**

11. ಬೆಂಗಳೂರಿನ ಸರ್ಕಾರಿ ನರ್ಸಿಂಗ್ ಕಾಲೇಜಿನ ಸಹಾಯಕ ಪ್ರಾಧ್ಯಾಪಕರಾದ ಡಾ: ಬಿ.ಟಿ. ಬಸವಂತಪ್ಪರವರ ಮೇಲೆ 1957ರ KCS(CCA) ನಿಯಮಾವಳಿಯ 8(ii)ನೇ ನಿಯಮದಡಿಯಲ್ಲಿ ವಾಗ್ದಂಡನೆ (Censure) ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 1327

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಅಧ್ಯಾಯಗಳನ್ನು ವಿದ್ವಾಂಸರಿಂದ ರಚಿಸಲು ಸಂಭಾವನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕ.ಗ್ಯಾ.ಇ.ಸಿ.(2) ದ.ಕ.ಜಿ.ಗ್ಯಾ. 2005-06, ದಿನಾಂಕ: 07.06.2005 ಮತ್ತು 18.08.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು, ಇವರು ಗ್ಯಾಸೆಟಿಯರ್, ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ನುರಿತ ಸಂಪಾದಕರುಗಳು ಇತ್ತೀಚೆಗೆ ನಿವೃತ್ತರಾಗಿರುವ ಕಾರಣ ದಕ್ಷಿಣ ಕನ್ನಡ ಜಿಲ್ಲೆಯ ಗ್ಯಾಸೆಟಿಯರ್ ಸಂಪುಟದ ಅಧ್ಯಾಯಗಳನ್ನು ಪರಿಣಿತ ವಿದ್ವಾಂಸರಿಂದ ರಚಿಸಲು ಸಂಭಾವನೆ ಭರಿಸಲು ಆಡಳಿತಾತ್ಮಕ ಮಂಜೂರಾತಿ ಕೋರಿದ್ದಾರೆ. ಈ ಕುರಿತು ಕೆಲವು ವಿದ್ವಾಂಸರನ್ನು ಸಂಪರ್ಕಿಸಲಾಗಿದ್ದು, ಈ ಕೆಳಗೆ ನಮೂದಿಸಿರುವ 3 ಅಧ್ಯಾಯಗಳನ್ನು ಆಯಾ ಕ್ಷೇತ್ರಗಳಲ್ಲಿ ಪರಿಗಣಿತಿ ಪಡೆದಿರುವ ವಿದ್ವಾಂಸರುಗಳಿಗೆ ವಹಿಸಲು ಹಾಗೂ ಒಂದು ಅಧ್ಯಾಯಕ್ಕೆ ಪ್ರತಿಯೊಬ್ಬ ವಿದ್ವಾಂಸರಿಗೆ ತಲಾ ರೂ.20,000 ಗಳಂತೆ ಒಟ್ಟು 60,000/- (ಅರವತ್ತು ಸಾವಿರಗಳು ರೂಪಾಯಿಗಳು ಮಾತ್ರ) ಮಂಜೂರು ಮಾಡುವಂತೆ ಕೋರಿದ್ದಾರೆ.

| | | |
|---|---|---|
| ಅಧ್ಯಾಯ-15 | - | ಆರೋಗ್ಯ ಮತ್ತು ವೈದ್ಯಕೀಯ ಸೇವಾ ಸೌಲಭ್ಯಗಳು |
| ಅಧ್ಯಾಯ-14 | - | ಸಾಹಿತ್ಯ ಮತ್ತು ಸಂಸ್ಕೃತಿ |
| ಅಧ್ಯಾಯ-16 | - | ಇತರೆ ಸಮಾಜ ಸೇವೆಗಳು |

ಈ ಬಗ್ಗೆ ತಗಲುವ ವೆಚ್ಚ 60,000/- ರೂಪಾಯಿಗಳನ್ನು 2005-06ನೇ ಸಾಲಿನ ಲೆಕ್ಕ ಶೀರ್ಷಿಕೆ 3454-02-110-0-01 (ಯೋಜನೆ) ಉಪಶೀರ್ಷಿಕೆ 059 ರಡಿಯಲ್ಲಿ ಭರಿಸಲು ನಿರ್ಧರಿಸಿ ಈ ಕೆಳಗಿನ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 13 ಕರಾಗೆ 2005, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಈ ಕೆಳಗಿನಂತೆ 3 ಅಧ್ಯಾಯಗಳನ್ನು ಆಯಾ ಕ್ಷೇತ್ರದಲ್ಲಿ ಪರಿಣಿತಿ ಪಡೆದ ವಿದ್ವಾಂಸರಿಗೆ ವಹಿಸಲು ಪ್ರತಿಯೊಬ್ಬ ವಿದ್ವಾಂಸರಿಗೆ ತಲಾ ರೂ.20,000 ಗಳಂತೆ ಒಟ್ಟು 60,000/- ರೂಪಾಯಿಗಳನ್ನು ಸಂಭಾವನೆ ನೀಡಲು ಮಾತ್ರ ಸರ್ಕಾರ ಮಂಜೂರು ಮಾಡಿದೆ.

| | | |
|---|---|---|
| ಅಧ್ಯಾಯ-15 | - | ಆರೋಗ್ಯ ಮತ್ತು ವೈದ್ಯಕೀಯ ಸೇವಾ ಸೌಲಭ್ಯಗಳು |
| ಅಧ್ಯಾಯ-14 | - | ಸಾಹಿತ್ಯ ಮತ್ತು ಸಂಸ್ಕೃತಿ |
| ಅಧ್ಯಾಯ-16 | - | ಇತರೆ ಸಮಾಜ ಸೇವೆಗಳು |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 3454-02-110-0-01 (ಯೋಜನೆ) ಉಪಶೀರ್ಷಿಕೆ 059 ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಸಿ 96, ದಿನಾಂಕ: 10.7.96 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಸಂಸ್ಕೃತಿ ಇಲಾಖೆ.

ಪಿ.ಆರ್. 1329